ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೪ ಆಗಸ್ಟ್ ೨೦೦೮ ಸಂಚಿಕೆ : ೮



ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕರಾದ ಶ್ರೀ ವಿ.ಎಸ್. ಉಗ್ರಪ್ಪನವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಜಿಲ್ಲಾ ಕಾಂಗ್ರೆಸ್ ಮುಖಂಡರಾದ ಶ್ರೀ ಜಿ.ಎಸ್. ಬಸವರಾಜ್, ಶ್ರೀ ಷಫಿ ಅಹಮದ್, ಶ್ರೀ ಅಸ್ಲಾಂ ಪಾಷಾ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಆದಾಯ ತೆರಿಗೆ ಇಲಾಖೆಯ ಹಿರಿಯ ಅಧಿಕಾರಿಗಳಾದ ಶ್ರೀ ದುರ್ಗೇಶ, ಶ್ರೀ ಬಿ.ಆರ್. ಸುಧಾಕರ್, ಶ್ರೀ ಟಿ.ಎನ್.ಸಿ. ಶ್ರೀಧರ್ ಮೊದಲಾದವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ಅಶೀರ್ವಾದ ಪಡೆದರು.




ನ್ಯಾಯಮೂರ್ತಿ ಎಂ. ರಾಮಾಜೋಯಿಸ್ ಅವರ 'ಸಾಮರಸ್ಯ ಜೀವನಕ್ಕಾಗಿ ರಾಷ್ಟ್ರೀಯ ಸಮನ್ವಯತೆ' ಕೃತಿಯ ಲೋಕಾರ್ಪಣಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳವರು ಹಾಗೂ ಗಣ್ಯರು







॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ


ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

# ಸಿದ್ಧಗಂಗಾ


ಸಂಪುಟ : ೪೪ ಆಗಸ್ಟ್ ೨೦೦೮ ಸಂಚಿಕೆ : ೮


## ಒಳಪುಟಗಳಲ್ಲಿ ......................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ವಾರಣದ ತಲೆಯ ನೊಡೆದು*
*ಉತ್ತುಂಗರಾಶಿಯೆಂಬ ಭಕ್ತ್ಯಂಗನೆ ಉದಯವಾದಳು*
*ನೋಡಾ.*
*ಭಕ್ತ್ಯಂಗನೆಯ ಬಸುರೆಲ್ಲ ನಿತ್ಯನಿರ್ಮಲ ಜ್ಯೋತಿ!*
*ಸತ್ಯಂ ಜ್ಞಾನಮನಂತಂ ಬ್ರಹ್ಮವನೆಯ್ದಿ ನುಂಗಿ*
*ಉಗುಳಲಾರದೆ*
*ಅಲ್ಲಿಯೇ ಸತ್ತಿತ್ತು ನೋಡಾ.*
*ತಾ ಸತ್ತ ಬಳಿಕ ಇನ್ನೆತ್ತಳ ತತ್ತ್ವಾತತ್ತ್ವ ವಿಚಾರವು ಹೇಳಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಅಪ್ಪಮದಯುಕ್ತವಾದ ಜೀವನಜ್ಞಾನವೆಂಬ ಶಿರಸ್ಸನಾವಿರ್ಭವಿಸಿ ಉನ್ನತವಾದ ಮೋಕ್ಷದ ಪುಂಜವೆಂದು ಹೇಳಿಸುವ ಭಕ್ತಿಯೆ ಅಂಗವಾಗುಳ್ಳ ಶರಣಸತಿ ಉತ್ಪತ್ಯವಾದಳು. ಆ ಸಮರಸ ಭಕ್ತಿಯೇ ಅಂಗವಾಗುಳ್ಳ ಶರಣಸತಿಯ ಚಿದ್ಗರ್ಭವೆಲ್ಲವು, ಕೇಡಿಲ್ಲದೆ ಸ್ವಚ್ಛರೂಪದಿಂದೆ ಬೆಳಗುವ ಚಿಜ್ಜ್ಯೋತಿಸ್ವರೂಪಾದ ಸಚ್ಚಿದಾನಂದ ಬ್ರಹ್ಮವನು ಚೆನ್ನಾಗವ ಗ್ರಹಿಸಿ, ಬಹಿರ್ಗತವ ಮಾಡದೆ, ಆ ಸದ್ರೂಪ ಬ್ರಹ್ಮವೆಯಾರ್ಗಿರ್ಪುದು. ಆ ತಾನು ಸದ್ರೂಪ ಬ್ರಹ್ಮವೆ ಆದಮೇಲೆ, ಅವ ಕಡೆಯಣ ಸದ ಸದ್ವಸ್ತುವಿನ ವಿವೇಕ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸತ್ಯಶಿವರೂಪವೆ ಎದುರಿಗೆ ಅರಳಿರುವಾಗ
ಮತ್ತೊಂದಕ್ಕೆರಗಿ ಕೆಡಲಾರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯವ ಧರಿಸಿದ್ದು ನಿರ್ಮಾಯನೆನಿಸಿರುವ
ಕಾಯ ಕೈಲಾಸವ ಮಾಡಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಹವನು ಜರಿಯದೆ ಪರವನು ಸಾಧಿಪ
ಪರಮ ಜೀವನ ಕಲೆಯ ತೋರಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮೊಳು ನಾಕಂಡೆ ಸಾವಿರ ಸಾವಿರ ದೀಪ
ನಿಮ್ಮ ನುಡಿಯೊಳಗೆ ಶಿವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮಗೆ ದಾಸೋಹವೆ ಸರುವ ಪಾವನವಾಯ್ತು
ನಿಮಗೆ ದಾಸೋಹವೆ ಶಿವತಪವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮಗೆ ದಾಸೋಹವೆ ಸರುವ ಸಾಧನವಾಯ್ತು
ನಿಮಗೆ ದಾಸೋಹವೆ ಉಸಿರುಸಿರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮಗೆ ದಾಸೋಹವೆ ಲೋಕದರ್ಶನವಾಯ್ತು
ನಿಮಗೆ ದಾಸೋಹವೆ ಶಿವಪೂಜೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನೊಳಗೆ ನೀನಿದ್ದು ಹಾಡಾಗಿ ಹರಿದಿರುವೆ
ಎನ್ನೊಳಗಿನ ಕೊಳೆಯ ತೊಳೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಂದೆ ತಾಯಿಯ ಪುಣ್ಯ ನಿನ್ನನು ಕಾಣಿಸಿತು
ಹಿಂದಣ ಸಂದೇಹ ಹಿಂಗಿಸಿತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಮುಖದಿಂದ ಬಂದು ಭಕ್ತಿಯ ಬಿತ್ತಿರುವೆ
ಹರಹಿಕೊಂಡಿರುವೆದಾಸೋಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಕಾಯಕವೇ ಕೈಲಾಸ

*ಗ್ರಾಮಾಂತರ ಬಸವ ಜಯಂತಿ ಶ್ರೀಮಠದ ಒಂದು ಜನಕಲ್ಯಾಣ ಯೋಜನೆ ಎಂಬುದಾಗಿ ಗ್ರಾಮೀಣ ಬಂಧುಗಳ ಅನಿಸಿಕೆ. ಅವರ ಅನಿಸಿಕೆಯನ್ನು ಒಪ್ಪಬೇಕಾಗಿದೆ. ಬಸವಣ್ಣನವರ ದೃಷ್ಟಿ ಇದ್ದುದು ಜನಸಾಮಾನ್ಯರ ಉದ್ಧಾರದ ಕಡೆಗೆ. ಅಕ್ಷರ ವಂಚಿತರ ಕಡೆಗೆ. ಅವರ ತತ್ವಗಳು ಹೇಳುತ್ತಿರುವುದೂ ಅದನ್ನೇ. ಶ್ರಮಿಕ ವರ್ಗದವರ ಏಳ್ಗೆಯಾಗದ ಹೊರತು ಕಲ್ಯಾಣರಾಜ್ಯ ನಿರ್ಮಾಣವಾಗದು. ಅದಕ್ಕಾಗಿ ದುಡಿಮೆಯನ್ನು ಅವಲಂಬಿಸುವುದಾಗಬೇಕು. ದುಡಿಮೆಯಲ್ಲಿ ಸ್ವಾಭಿಮಾನ, ಸ್ವಾತ್ಮಸಂತೋಷ, ಸ್ವಸಾಕ್ಷಾತ್ಕಾರ, ಸ್ವರಕ್ಷಣೆ, ಶಿವಗುಣಗಳನ್ನು ಕಾಣಲು ಸಾಧ್ಯ. ದುಡಿಮೆ ದೇವರಾಗಬೇಕು. ಆ ಕಾರಣಕ್ಕಾಗಿಯೇ ಬಸವಣ್ಣನವರು ಕಾಯವೇ ಕೈಲಾಸವಾಗಬೇಕೆಂದರು. ಕೈಲಾಸವಾದ ಕಾಯದಲ್ಲಿ ದೇವರಿರುವುದರಲ್ಲಿ ಸಂಶಯವಿಲ್ಲ. ಅವನನ್ನು ಕೈಲಾಸಪತಿ, ಕೈಲಾಸನಾಥ ನೆನ್ನುತ್ತೇವೆಯಲ್ಲವೆ. ಅಂಥ ಕೈಲಾಸ ಕಾಣದ ಲೋಕವಲ್ಲ, ಅದು ದೂರದಲ್ಲಿಲ್ಲ, ಅದು ನಮ್ಮೊಂದಿಗೇ ಇದೆ. ನಮ್ಮ ದೇಹವೇ ಕೈಲಾಸವಾಗಿದೆ. ಅಷ್ಟೇ ಅಲ್ಲ ಅದು ದೇವಾಲಯವಾಗಿದೆ. ದೇವನ ಆಲಯವಾದುದು ದೇವಾಲಯವೇ ತಾನೆ. ಅದರ ರಚನೆಯಾದರೂ ಹೇಗಿದೆ. ಕಾಲುಗಳೇ ಕಂಭವಾಗಿವೆ. ಶಿರವೇ ಬಂಗಾರದ ಕಲಶವಾಗಿದೆ. ಜಂಗಮ ಶಬ್ದಕ್ಕೆ ವಿಶೇಷಾರ್ಥಗಳಿವೆ. ಅದು ಚಲಿಸಬಲ್ಲುದು, ಅದು ಜ್ಞಾನಸ್ವರೂಪಿಯಾಗಿದೆ, ಅಲ್ಲದೆ ಕ್ರಿಯಾಶೀಲವಾಗಿದ್ದು, ಜ್ಞಾನ-ಕ್ರಿಯಾ ಪ್ರಪೂರ್ಣವಾದುದಾಗಿದೆ. ನಮ್ಮ ದೇಹ ಸ್ಥಾವರವಾಗದಂತೆ ಮನಸ್ಸನ್ನು ಜಾಗೃತಗೊಳಿಸಿಕೊಂಡಿರಬೇಕು. ವಿಕಾಸಾತ್ಮಕವಾದ ದುಡಿಮೆಯಲ್ಲಿ ನಿರತವಾಗಿರಬೇಕು. ಗ್ರಾಮೀಣ ಬಂಧುಗಳು ದುಡಿಮೆಯ ಆರಾಧಕರಾಗಿ, ದ್ರಷ್ಟಾರರಾಗಿ ಪರಿವರ್ತಿತರಾಗಬೇಕು. ಅದಕ್ಕಾಗಿಯೇ ಬಸವಣ್ಣನವರ ನಾಟಕದ ಪ್ರದರ್ಶನ. ಇಂದು ಬೇಕಾಗಿರುವುದು ದುಡಿದುಣ್ಣುತ್ತೇನೆ ಎಂಬ ಪ್ರತಿಜ್ಞೆ, ಸಾಲ ಮಾಡಿ ಸಾಯುತ್ತೇನೆ ಎಂಬ ಪಲಾಯನ ಸೂತ್ರವಲ್ಲ.*

*

## ಸ್ವಾತಂತ್ರ್ಯ

೧೯೪೭ರ ಆಗಸ್ಟ್ ೧೫ ರಂದು ಭಾರತ ಸ್ವಾತಂತ್ರ್ಯವನ್ನು ಪಡೆಯಿತು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ದೇಶಭಕ್ತರಿಗೆ ದೂರದೃಷ್ಟಿಯಿತ್ತು. ಉದಾತ್ತಧ್ಯೇಯವಿತ್ತು. ಜಗತ್ತಿನಲ್ಲಿ ತಲೆಯೆತ್ತಿ ನಿಲ್ಲಬೇಕೆಂಬ ಛಲವಿತ್ತು. ಸ್ವಾವಲಂಬಿ ರಾಷ್ಟ್ರವಾಗಬೇಕು ಭಾರತ ಎಂಬ ಕನಸಿತ್ತು. ಅದಕ್ಕಾಗಿ ಅವರು ಶ್ರಮಿಸಿದರು.

ಆದರೆ, ಇಂದು ಎಲ್ಲವೂ ಭ್ರಷ್ಟಮಯವಾಗಿದೆ. 'ತಾನುಂಟೋ ಮೂರು ಲೋಕವುಂಟೋ'-ಎಂಬ ಸ್ವಾರ್ಥ ಎಗ್ಗಿಲ್ಲದೆ ಎದ್ದು ನಿಂತಿದೆ. ಅಧಿಕಾರದಾಹಕ್ಕೆ ಕೊನೆಯಿಲ್ಲವಾಗಿದೆ. ಅಧಿಕಾರಕ್ಕಾಗಿ ಏನು ಬೇಕಾದರೂ ಮಾಡಬಹುದು. ಅದು ತಪ್ಪಲ್ಲ ಎಂಬ ಭಾವನೆ ಬೆಳೆದು ಬಿಟ್ಟಿದೆ. ಜನಪ್ರತಿನಿಧಿಗಳು ತಮ್ಮನ್ನು ಮಾರಿಕೊಳ್ಳುತ್ತಿದ್ದಾರೆ. ಅವರು ಸುಳ್ಳಿನ ಸಾಹುಕಾರಿಕೆಯಲ್ಲಿ ಮುನ್ನಡೆದಿದ್ದಾರೆ. 'ಸುಳ್ಳು ನಮ್ಮಲ್ಲಿಲ್ಲ, ಸುಳ್ಳೇ ನಮ್ಮ ಮನೆ ದೇವರು'-ಎನ್ನುತ್ತಿದ್ದಾರೆ. ಅವರ ನಡೆ-ನುಡಿಗಳು, ರೀತಿ-ರಿವಾಜುಗಳು, ಮೇಜು-ಮೋಜುವಾನಿಗಳು, ಅಂತರಂಗ-ಬಹಿರಂಗ-ಜನಸಾಮಾನ್ಯರ ಮೇಲೆ ದುಷ್ಪರಿಣಾಮಗಳನ್ನುಂಟುಮಾಡುತ್ತಿರುವುದು ಹಗಲಿನಷ್ಟೇ ಸತ್ಯವಾಗಿದೆ. ಪಕ್ಷ, ಪಕ್ಷಗಳ ಪ್ರಣಾಳಿಕೆಗಳೆಲ್ಲ ಸುಳ್ಳಿನ ಕಂತೆ-ಬೊಂತೆಗಳಾಗಿವೆ. ಯುವಜನತೆಗೆ ವಿಷ ಉಣಿಸುತ್ತಿವೆ. ತಾನು, ತನ್ನ ಕುಟುಂಬ, ತನ್ನ ಜಾತಿಯೇ ಜಾತ್ಯಾತೀತ ರಾಷ್ಟ್ರದ ಹೆಸರಿನಲ್ಲಿ ಅಧಿಕಾರದ ಗದ್ದುಗೆಯೇರಲು ಸ್ಥಾನ-ಮಾನಗಳನ್ನು ಗಾಳಿಗೆ ತೂರಿ ಬೊಬ್ಬೆ ಹಾಕುತ್ತಿದ್ದಾರೆ. ಜನರ ಜೀವನ ಧೂಳಿ ದೂಸರವಾಗಿದೆ. ಯೋಜನೆಗಳ ಹೆಸರಿನಲ್ಲಿ ಒಳ-ಹೊರ ವ್ಯವಹಾರ ಸಿಗ್ಗಿಲ್ಲದೆ ನಡೆದಿದೆ. ಸಮಾಜ ಘಾತುಕರೆನಿಸಿಕೊಂಡವರು, ರೌಡಿಗಳೆನಿಸಿಕೊಂಡವರು, ಕೊಲೆ ಸುಲಿಗೆಗಳಲ್ಲಿ ಪಾಲುದಾರರಾದವರು, ಅಪಮಾರ್ಗದಲ್ಲಿ ಹಣ ಮಾಡಿದವರು, ಆಡಳಿತ ಮಾಡುವವರಾಗಿದ್ದಾರೆ. ಅವರಿಗೆ ತಕ್ಕಂತೆ ತಾಳ ಹಾಕುವ ಅಧಿಕಾರಿಗಳಿದ್ದಾರೆ, ನೌಕರರಿದ್ದಾರೆ. ತಾನು ಕೊಂಡು ಕೊಂಡ ಆಸ್ತಿಯ ಖಾತೆಯನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳಲೂ ಸಾವಿರ ಸಾವಿರ ರೂ ಲಂಚಕೊಡಬೇಕಾದ ಪರಿಸ್ಥಿತಿಯುಂಟಾಗಿದೆ. ವಿದ್ಯಾರ್ಥಿ ತನ್ನ ಜಾತಿಪತ್ರವನ್ನು, ಆದಾಯ ಪತ್ರವನ್ನು ಪಡೆದುಕೊಳ್ಳಲು ಲಂಚ ಕೊಡಬೇಕಾಗಿದೆ.

ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿದ್ದೇವೆ. ಇದಕ್ಕಾಗಿ, ಇಂಥದಕ್ಕಾಗಿ ನಮ್ಮ ಹಿರಿಯರು ಸ್ವಾತಂತ್ರ್ಯ ತಂದು ಕೊಟ್ಟರೆ? ನಾವೆಷ್ಟು ಮೌಲ್ಯಗೊಂಡಿದ್ದೇವೆ. ಅಕ್ಷರ ಶಿಕ್ಷಣ ಪಡೆದವರೆಷ್ಟು ಸುಸಂಸ್ಕೃತರಾಗಿದ್ದೇವೆ. ಕಿಡ್ಡಿಗಳನ್ನು ಕದಿಯುತ್ತಿದ್ದೇವೆ. ಬಿರುಕು ಬಿಡುವಂತಹ ಅಣೆಕಟ್ಟುಗಳನ್ನು ಕಟ್ಟುವವರಾಗಿದ್ದೇವೆ. ನಿರ್ಮಾಣಮಾಡುವವರಾಗಿದ್ದೇವೆ, ನಕಲಿ ಪದವಿಗಳನ್ನು ಗಳಿಸುವವರಾಗಿದ್ದೇವೆ, ಸುಳ್ಳು ಸಾಕ್ಷಿಗಳನ್ನು ಗಳಿಗೆ ಕಾರಣರಾಗಿದ್ದೇವೆ. ಈ ಎಲ್ಲವುಗಳಲ್ಲಿ ಹೆಣ್ಣು-ಗಂಡು, ಸ್ಪೃಶ್ಯ-ಅಸ್ಪೃಶ್ಯ, ಕ್ರೈಂ ಸ್ಟೋರಿ, ಕ್ರೈಂ ಡೈರಿ ಹಳ್ಳಿಗ-ಪಟ್ಟಣಿಗ, ಕಲಿತವ-ಕಲಿಯದವ ಎಂಬ ಭೇದವಿಲ್ಲದೆ ಸಾಗಿದ್ದೇವೆ. ಅಲ್ಪಸಂಖ್ಯಾತ-ಬಹುಸಂಖ್ಯಾತ, ಪರಸ್ಪರ ಹೊಂದಿಕೊಂಡೇ ಮುನ್ನಡೆದಿದ್ದೇವೆ. ಇದು ಮುನ್ನಡೆಯೇ? ಪ್ರಗತಿಯೇ? ವರ್ಣ, ವರ್ಗ, ಭಾಷೆಗಳೆಲ್ಲ ಇಲ್ಲಿ

ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿದ್ದೇವೆ. ತ್ರಿವರ್ಣಧ್ವಜವನ್ನು ಹಾರಿಸುತ್ತಿದ್ದೇವೆ. 'ಭಾರತಮಾತಾಕೀ ಜೈ' ಎನ್ನುತ್ತಿದ್ದೇವೆ.

– ಸಂಪಾದಕ





## ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

### ವಿಶ್ವದ ಸಂತ ಪರಂಪರೆ : ಬಸವ, ಮಹದೇವಿಯಕ್ಕ

'ವಿಶ್ವ ಸಂಸ್ಕೃತಿಯಲ್ಲಿ ವೀರಶೈವ ಸಂಸ್ಕೃತಿಯ ಸ್ಥಾನ' ಅಥವಾ 'ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿ ನೀಡಿರುವ ಕಾಣಿಕೆ' ಏನೆಂಬುದನ್ನು ತಿಳಿಯಲು ಪೂರ್ವೋಕ್ತ ವಿವರಣೆ ಅಗತ್ಯವೆಂಬ ಕಾರಣದಿಂದ ಅದು ತುಸು ದೀರ್ಘವಾಗಿದೆ. ವೀರಶೈವ ಸಂಸ್ಕೃತಿಯ ಮೂಲ ವೀರಶೈವ ಸಾಹಿತ್ಯ ಅರ್ಥಾತ್ ವೀರಶೈವ ಧಾರ್ಮಿಕ ಸಾಹಿತ್ಯ. ವಿಜ್ಞಾನಾದಿ ನಾನಾ ಜ್ಞಾನ ಶಾಖೆಗಳು ಸಂಸ್ಕೃತಿಯ ಸೆಲೆಗಳಾದರೂ, ಅದು ಸಾಂದ್ರವಾಗಿ ಹಾಗೂ ಪ್ರಖರವಾಗಿ ಹೊರಹೊಮ್ಮುವ ಕ್ಷೇತ್ರಗಳೆಂದರೆ ಕಲೆ ಸಾಹಿತ್ಯ ಹಾಗು ಧಾರ್ಮಿಕ ಗ್ರಂಥಗಳು. ಪ್ರಸ್ತುತ ಅಧ್ಯಯನಕ್ಕೆ ವೀರಶೈವ ಧಾರ್ಮಿಕ ಸಾಹಿತ್ಯವನ್ನು ಮಾತ್ರ-ಅದರಲ್ಲಿಯೂ ಕನ್ನಡದಲ್ಲಿ ಪ್ರಕಟಗೊಂಡಿರುವಷ್ಟನ್ನು ಮಾತ್ರ ಆಧಾರವಾಗಿಟ್ಟುಕೊಳ್ಳಲಾಗಿದೆ.

ಭಗವಂತನ ಅವತಾರೋದ್ದೇಶವೆಂತೋ ಒಂದು ಮತದ ಅವತಾರೋದ್ದೇಶವೂ ಅಂತೆಯೇ ಗ್ಲಾನಿಯ ದಮನ, ರೋಗಪೀಡಿತ ಸಮಾಜದ ಆರೋಗ್ಯ ಸಂವರ್ಧನೆ, ಆತ್ಮಶ್ರೀಯ ಪುನರುತ್ಥಾಪನೆ. ಹಳೆಯ ಮತ ಜಡ್ಡುಗಟ್ಟಿ, ಆತ್ಮವಿನಾಶಕಾರೀ ವ್ಯಾಪಾರಗಳಿಗೆ ಆಸರೆಯಾಗಿ, ಸಮಾಜದ ಊರ್ಧ್ವಮುಖ ಪ್ರಗತಿಗೆ ಕಂಟಕವಾದ ಸಂದರ್ಭದಲ್ಲಿ ಹೊಸ ಮತದ ಉದಯವಾಗುವುದು ನಿಸರ್ಗ ಧರ್ಮ. ಕ್ರೈಸ್ತ ಇಸ್ಲಾಂ ವೀರಶೈವ ಸಿಖ್ ಧರ್ಮಗಳು ಹುಟ್ಟಿದ್ದೇ ಹೀಗೆ, ಹಿಂದೂ ಧರ್ಮ ಕೇವಲ ಹಿಡಿಮಂದಿ ಶೋಷಕರ ಅನುವಂಶೀಯ ಸ್ವತ್ತಾಗಿ, ನಾಡಿನ ಬಹುಮಂದಿಯನ್ನು ಅಜ್ಞಾನಾಂಧಕಾರದಲ್ಲಿಟ್ಟು, ವಿಚ್ಛಿದ್ರಕಾರಿ ಶಕ್ತಿಗಳನ್ನು ಬೆಳೆಸಿ ರಾಷ್ಟ್ರಪುರುಷನ ಅಸ್ತಿತ್ವಕ್ಕೆ ಗಂಡಾಂತರವನ್ನು ತಂದ ಸಂದರ್ಭದಲ್ಲಿ ಅದಕ್ಕೆ ಪ್ರಬಲ ಪ್ರತಿಭಟನೆಯ ರೂಪದಲ್ಲಿ, ಕ್ರಾಂತಿಶಕ್ತಿಯಾಗಿ ಹುಟ್ಟಿದ್ದೇ ವಿಶ್ವಸಂಸ್ಕೃತಿಯ ಸುಯೋಗವೆನ್ನಬೇಕು. ಪುನರ್ಸೃಷ್ಟಿ ಅದರ ಉದ್ದೇಶವೇ ಹೊರತು ಪ್ರಳಯವಲ್ಲ; ಅದು ಪರಂಪರೆಯ ಉತ್ತಮಾಂಶಗಳನ್ನುಳಿಸಿಕೊಂಡು, ಹೊಸ ಧಾತು ಜೀವದ್ರವ್ಯಗಳನ್ನು ತುಂಬಿಕೊಂಡು, ನವೀನ ಸ್ವತಂತ್ರ ವ್ಯಕ್ತಿತ್ವವನ್ನು ಪಡೆಯುವಾಗ, ಹಿಂದೂಮತವನ್ನು ನಾಶಮಾಡಲಿಲ್ಲ; ಅದನ್ನುದ್ಧರಿಸಿತೆಂದೇ ಹೇಳಬಹುದು. ಬೌದ್ಧಮತವನ್ನು ಅರಗಿಸಿಕೊಂಡು, ಜೈನಮತವನ್ನು ನಿರ್ಲಕ್ಷಿಸಿ, ನಾಲ್ಕು ಸಾವಿರ ವರ್ಷಗಳಿಂದ ಅತ್ಯಂತ ವೈಭವದಿಂದ ಅಪ್ರತಿಹತವಾಗಿ ಮೆರೆದಿದ್ದ ಹಿಂದೂಮತಕ್ಕೆ ಸವಾಲಾಗಿ ಅದು ಬೆಳೆದಾಗ ಯಾರಿಗಾದರೂ ಆಶ್ಚರ್ಯವಾಗದಿರದು. ಹಿಂದೂಮತದೊಳಗಣ ಅನಿಷ್ಟ ದೌರ್ಬಲ್ಯಗಳ ಜತೆಗೆ, ಹಿಂದೂಮತ ಪ್ರವರ್ತಕರಿಗೆ ಹೆಗೆಲೆಣೆಯಾಗಿ ಹೊಸ ಮತದ ರೂಪುರೇಷೆಗಳನ್ನು ಕಲ್ಪಿಸಿಕೊಂಡು, ಆತ್ಮಶ್ರದ್ಧೆಯಿಂದ ತತ್ವನಿಷ್ಠೆಯಿಂದ ತಪೋನುಷ್ಠಾನದಿಂದ ತ್ಯಾಗ ವೈರಾಗ್ಯಗಳಿಂದ ಯೋಗ ಸಮನ್ವಯದ ಮೂಲಕ ಛಲದಿಂದ ಸರ್ವಸಿದ್ಧಿಗಳನ್ನು ಅರ್ಜಿಸಿದ ಶರಣರ ಮಹಿಮೆಯೇ ಹೊಸ ಮತದ ಸುಶೀಘ್ರ ವಿಕಾಸಕ್ಕೆ ಅದರ ಅದಮ್ಯ ಪ್ರಾಬಲ್ಯ ಪ್ರಭಾವಗಳಿಗೆ ಕಾರಣವೆನ್ನಬೇಕು. ನೊಂದವರ, ಬೆಂದವರ, ಮಾತಿಲ್ಲದವರ, ಬಿದ್ದವರ, ಸರ್ವಸಾಮಾನ್ಯರ ದನಿಗಳಾಗಿ, ಪ್ರತಿನಿಧಿಗಳಾಗಿ, ಅವರ ಅಭೀಪ್ಸೆಯ ಹರಿಕಾರರಾಗಿ, ಅವರ ಲೇಸಿಗಾಗಿ, ಅವರ ಏಳ್ಗೆಗಾಗಿ ಆ ಶರಣರು ತಮ್ಮ ಜೀವನವನ್ನೇ ಪಣವಾಗೊಡ್ಡಿ ತಮ್ಮ ಜೀವಮಾನವನ್ನೇ ಸಮೆಸಿದ, ಹುತಾತ್ಮರಾದ ಕಾರಣದಿಂದಾಗಿ ಭವಿಷ್ಯಕ್ಕೊಂದು ಭರವಸೆಯಾಗಿ, ಜಗತ್ತಿಗೊಂದು ಆದರ್ಶವಾಗಿ, ವಿಶ್ವ ಸಂಸ್ಕೃತಿಯ ನಿಶಾನಿಯಾಗಿ ಬೆಳೆಯುವಂತಾಯಿತು. ಯಾವುದೇ ಮತವಾಗಲಿ ಆಕಾಶದಿಂದ ದುರುವ ಮಂತ್ರ ತಂತ್ರಗಳ ಕುತಂತ್ರವಾಗದೆ, ಶ್ರೀಸಾಮಾನ್ಯ ಸಮಾಜದಿಂದ ಮೂಡಿ, ಅದರಿಂದಲೇ ಸ್ಫೂರ್ತಿ ಪಡೆದು, ಅದರ ಕ್ಷೇಮಕ್ಕಾಗಿಯೇ ಕಾಲಾನುಗುಣವಾಗಿ ಪ್ರಗತಿ ಹೊಂದುತ್ತ, ಹಾವು ಆಗಾಗ್ಗೆ ಪೊರೆಗಳಚಿ ನೂತನವಾಗುವಂತೆ, ಹಳಸಲನ್ನು ಜೀರ್ಣವಾದದ್ದನ್ನು ತೆಗೆದೊಗೆದು, ಹೊಸ ಹೊಸ ಭಾವಾಲೋಚನೆಗಳನ್ನು ಗರ್ಭೀಕರಿಸಿಕೊಳ್ಳುತ್ತ ಮುಂದೆ ಮುಂದೆ ಜೀವಂತ ಚಲನಶಕ್ತಿಯಾಗಿ ಸಾಗುವುದಾದರೆ ಮಾತ್ರ ಸ್ವಸಂಪೂರ್ಣ ಸುಸಾರ್ಥಕ ರಕ್ಷಕ ಶಕ್ತಿಯಾಗುಳಿಯುತ್ತದೆಯೆಂಬುದನ್ನು ಆದಿ ವೀರಶೈವ ಮತ (ಬಸವಧರ್ಮ) ಜಗತ್ತಿಗೆ ತೋರಿಸಿಕೊಟ್ಟಿದೆ.

ವೀರಶೈವ ಮತದ ಕಲ್ಪನೆಯೇ ಒಂದು ಅದ್ಭುತ ಸಂಗತಿ. ಅದರ ರೂಪುರೇಷೆಗಳನ್ನು ತಿದ್ದಿ ಪರಂಪರೆಗೆ ಅಪೋಹವಾಗದಂತೆ ಅದಕ್ಕೊಂದು ವಿನೂತನ ತಾತ್ವಿಕ ನೆಲೆಗಟ್ಟನ್ನು ರೂಢಿಸಿ, ಸರ್ವಸಮಾನತೆ, ಭ್ರಾತೃತ್ವ ಮತ್ತು

ಸ್ವಾತಂತ್ರಗಳ ಆಧಾರದ ಮೇಲೆ ಜೀವನ ಸಿದ್ಧಾಂತವನ್ನು ರೂಪಿಸಿ, ತಮ್ಮ ತಪಸ್ಸಿದ್ಧಿಯನ್ನು ಬಸವೇಶ್ವರ, ಅಲ್ಲಮಪ್ರಭು, ಚನ್ನಬಸವಣ್ಣ, ಸಿದ್ಧರಾಮ, ಮಹಾದೇವಿಯಕ್ಕ ಮೊದಲಾದವರು ಧಾರೆಯೆರೆದದ್ದರಿಂದಲೇ ಅದೊಂದು ಸಮಗ್ರ ಕ್ರಾಂತಿಯ ಏಕೈಕ ಮಾಧ್ಯಮವಾಗಿ ಆ ಕಾಲದಲ್ಲಿ ಮೈದಾಳಿತು. ಪ್ರಪಂಚದ ಯಾವ ಸಂತರಿಗೂ ಕಡಿಮೆಯಿಲ್ಲದ ಮಹಾಸಂತರವರು. ಇಂಥ ಸಂತರಿಂದ ಒಂದು ಮತ ಹುಟ್ಟುತ್ತದೆ; ಕಾಲಕಾಲಕ್ಕೆ ಅಂಥ ಸಂತರು ಹುಟ್ಟಿ ತಮ್ಮ ತಪೋಬಲದಿಂದ ಅದನ್ನುದ್ಧರಿಸದಿದ್ದಾಗ ಅದು ಪುರೋಹಿತರ ಪೂಜಾರಿಗಳ ಸ್ವಾಮಿಗಳ ಮೌಲ್ವಿಗಳ ಸ್ವಾರ್ಥಿಗಳ ನೀತಿಭ್ರಷ್ಟರ ಸ್ವತ್ತಾಗಿ ಅವನತಿ ಹೊಂದುತ್ತದೆ.

ವೀರಶೈವಮತ ಇನ್ನೂ ಜೀವಂತವಾಗಿರಬೇಕಾದರೆ ಅಂದಿನ ಸಂತರ ತಪೋಮಹಿಮೆಯೇ ಕಾರಣ. ಜಗತ್ತಿನ ಇತಿಹಾಸವನ್ನೆಲ್ಲ ಆವರಿಸಿಕೊಂಡಿರುವ ಅಲೆಕ್ಸಾಂಡರ್ ನೆಪೋಲಿಯನ್ ವಾಷಿಂಗ್‌ಟನ್ ಬಿಸ್ಮಾರ್ಕ್ ಲೂಯಿ ಮೊದಲಾದ ಮಹಾಯೋಧರಾಗಲಿ, ಚಕ್ರವರ್ತಿಗಳಾಗಲಿ ಇತಿಹಾಸ ನಿರ್ಮಾಪಕರಲ್ಲ. ಯಾರ ಕರುಳು ಸಾಮಾನ್ಯ ಮಾನವನಿಗಾಗಿ ಕರಗುತ್ತದೆಯೋ, ಯಾರ ಹೃದಯ ಸಕಲ ಜೀವಿಗಳ ಲೇಸಿಗಾಗಿ ಸದಾ ತುಡಿಯುತ್ತದೆಯೋ, ಯಾರ ಜೀವನ ಸರ್ವಸ್ವ ಮಾನವನ ಸೇವೆಗಾಗಿ ಧರ್ಮೋದ್ಧಾರಕ್ಕಾಗಿ ಸಮರ್ಪಿತವಾಗಿದೆಯೋ, ಯಾರ ವಾಣಿ ದೇಶಕಾಲಾತೀತವಾಗಿ ಮನುಕುಲದ ಜೀವನಕ್ಕಾಧಾರವಾಗಿರುತ್ತದೆಯೊ, ಅವನೇ ನಿಜವಾದ ಇತಿಹಾಸ ನಿರ್ಮಾಪಕ, ಅವನೇ ಯುಗಪ್ರವರ್ತಕ, ನೆಪೋಲಿಯನ್ ಇದ್ದ, ಕೊಂದ, ಸತ್ತ; ಆದರೆ ಬುದ್ಧ ಯೇಸು ಬಸವೇಶ್ವರರು ಎಂದೆಂದಿಗೂ ಸಾಯುವುದಿಲ್ಲ; ಅವರಿರುವ ತನಕ ಲೋಕಕ್ಕೆ ಭಯವಿಲ್ಲ; ಅಶೋಕನೂ ಅಷ್ಟೇ; ಅವರೇ ಸಂಸ್ಕೃತಿಯ ಅಧ್ವರ್ಯುಗಳು; ಇತಿಹಾಸ ನಿರ್ಮಾಪಕರು. ವಿಶ್ವಸಂಸ್ಕೃತಿಗೆ ಭಾರತ ನೀಡಿರುವ ಕೊಡುಗೆಗಳಲ್ಲಿ ಬಸವೇಸ್ವರರೂ ಒಬ್ಬರು.

ಬಸವೇಶ್ವರರ ಜೀವನವೇ ಮಹಾಸಂಸ್ಕೃತಿಗೆತ್ತಿದ ನಂದಾದೀಪವಾಗಿದೆ. ಅವರ ವಚನಗಳೇ ಮುತ್ತಿನಾರತಿಗಳಾಗಿವೆ. ಅವರ ಆತ್ಮವೇ ಮೂರ್ತಸ್ವರೂಪ ಪಡೆದಂತಿರುವ ಪ್ರತಿಯೊಂದು ವಚನವೂ ಅವರ ಆತ್ಮಕತೆಯನ್ನುಸುರುತ್ತವೆ. ಆತ್ಮದ ಸಾರದಂತಿರುವ ಒಂದೊಂದು ವಚನವೂ ಅವರು ಮಹಾಸಂತರೆನ್ನುವುದಕ್ಕೆ ಸಾಕ್ಷಿಗಳಾಗಿವೆ.

ಸತ್ಯ ಸಾಕ್ಷಾತ್ಕಾರದ ಮಾರ್ಗ ಸುಲಭವಾದದ್ದಲ್ಲ; ನೇರವಾದದ್ದಲ್ಲ. ಅದರಲ್ಲಿ ಏರಿಳಿತಗಳಿವೆ, ಹಳ್ಳಕೊಳ್ಳಗಳಿವೆ, ಮುಳ್ಳುಕಂಟಿಗಳಿವೆ, ದುಷ್ಟಮೃಗಗಳಿವೆ, ಕಳ್ಳಕಾಕರಿದ್ದಾರೆ. ಅದಕ್ಕಾಗಿ ಸಾಧಕ ಐಹಿಕ ಸುಖಸಂಪತ್ತುಗಳನ್ನು ಮರೆತು, ಹಂಬಲಿಸಿ ಹಂಬಲಿಸಿ, ನಾನಾ ಯಾತನೆಗಳನ್ನನುಭವಿಸಿ, ಛಲವನ್ನು ತೊಟ್ಟು, ಬಾಹ್ಯಶತ್ರುಗಳ ಜತೆಗೆ ಅಂತ್ಯಶತ್ರುಗಳನ್ನು ಗೆದ್ದು, ಮೇಲಿಂದ ಮೇಲೆ ಕಾಡುವ ದೌರ್ಬಲ್ಯಗಳನ್ನು ಮೆಟ್ಟಿ, ಮಾಯಾವರಣವನ್ನು ಹರಿದು, ಕೊನೆಯ ನೆಲೆ ಮುಟ್ಟಬೇಕಾಗುತ್ತದೆ. ಅಂಥವರು ಮಹಾಸಂತರೆಂಬ ಬಿರುದಿಗೆ ಪಾತ್ರರಾಗುತ್ತರೆ. ಸಂತ ಅಗಸ್ಟಿನ್, ಕಬೀರ್, ಪುರಂದರದಾಸ ಮೊದಲಾದವರು ಈ ಗುಂಪಿಗೆ ಸೇರಿದವರು. ಈ ಎಲ್ಲ ಸಂತರ ಅನುಭಾವ, ಸಿದ್ಧಿ, ಸರ್ವಂಕುಶ ಸಾಧನೆಗಳನ್ನು ಗಮನಿಸಿದಾಗ, ಬಸವೇಶ್ವರರು ಅಗ್ರಮಾನ್ಯರೆಂಬುದರಲ್ಲಿ ಸಂದೇಹವಿಲ್ಲ. ಬಸವೇಶ್ವರರು ಸಂತ ಆಗಸ್ಟಿನ್‌ನ ವಚನಗಳನ್ನು ಓದಿಲ್ಲ; ಅವು ಜಗತ್ತಿನ ಶ್ರೇಷ್ಠ ಅನುಭಾವ ವಚನಗಳೆಂದು ಪ್ರಖ್ಯಾತವಾಗಿವೆ; ಬಸವೇಶ್ವರರ ವಚನಗಳನ್ನು ಅವುಗಳೊಡನೆ ಹೋಲಿಸಿದಾಗ, ಇವು ಅವಕ್ಕೆ ಕಡಿಮೆಯೇನಲ್ಲ; ಅವುಗಳಿಗಿಂತ ಒಂದು ಕೈ ಮೇಲೆಂದೇ ತೋರುತ್ತದೆ. ಬಸವೇಶ್ವರರ ವಚನಗಳಲ್ಲಿ ಕಾಣುವ ಅನುಭಾವ ಶ್ರೀಮಂತತೆಯಾಗಲಿ, ಕಾವ್ಯಲಕ್ಷಣಗಳಾಗಲಿ, ಲೋಕಾನುಭವ ವೈಭವವಾಗಲಿ ಆಗಸ್ಟಿನ್ ವಚನಗಳಲ್ಲಿಲ್ಲ, ಸತ್ಯಶೋಧನೆಗಾಗಿ, ಭಗವತ್ಸಾಕ್ಷಾತ್ಕಾರಕ್ಕಾಗಿ ಇಬ್ಬರೂ ಕೈಗೊಳ್ಳುವ ಯಾತನಾಮಯ ಸಾಹಸಯಾತ್ರೆ ದೌರ್ಬಲ್ಯಗಳಿಗೆ ಸಂಬಂಧಿಸಿದ ಆತ್ಮನಿಂದೆ, ಅವುಗಳನ್ನು ಹಿಮ್ಮೆಟ್ಟಿಸುವಾಗ ಪಟ್ಟ ಶ್ರಮ ಹೆಚ್ಚು ಕಡಿಮೆ ಎರಡರಲ್ಲೂ ಏಕಪ್ರಕಾರವಾಗಿವೆ.

ಮಾನವನ ದೌರ್ಬಲ್ಯ ಜಯವೇ ಸಜ್ಜನಿಕೆಯ ಮೊದಲ ಹೆಜ್ಜೆ. ಸುಸಂಸ್ಕೃತಿಯ ಪ್ರಾರಂಭ, ಸತ್ಯ ಸಾಕ್ಷಾತ್ಕಾರದ ತಳಹದಿ. ಬಸವೇಶ್ವರರ ಜೀವನಚರಿತ್ರೆಯನ್ನು ಅವರ ಸಮಕಾಲೀನರಾರೂ ಬರೆದಿಲ್ಲ; ಆದರೆ ಆ ಸಮಕಾಲೀನರ ಸ್ತುತಿರೂಪದ ವಚನಗಳು ಅವರ ಮಹಾವ್ಯಕ್ತಿತ್ವಕ್ಕೆತ್ತಿ ಹಿಡಿದಿರುವ ದರ್ಪಣಗಳಾಗಿವೆ, ಕಡೆದು ನಿಲ್ಲಿಸಿರುವ ವಾಕ್‌ಶಾಸನಗಳಾಗಿವೆ. ಇವುಗಳಿಂತ ಮಿಗಿಲಾಗಿ ಅವರ ಆತ್ಮಕಥನರೂಪದ ವಚನಗಳಲ್ಲಿ ವಚನಗಳಲ್ಲಿ ಅವರ ಭವ್ಯ ವ್ಯಕ್ತಿತ್ವ ಸುಸ್ಪಷ್ಟವಾಗಿ ಗೋಚರಿಸುತ್ತದೆ. ನಿಜಕ್ಕೂ ಅವು ವಿಶ್ವ ಸಂಸ್ಕೃತಿಯ ತವನಿಧಿಗಳಂತಿವೆ. ಓದುಗರಿಗೆ





ನೇರವಾಗಿ ಅವರ ದಿವ್ಯಚೇತನ ಪರಿಚಯವಾಗಲಿ, ಅವರ ಪವಿತ್ರ ವಿಗ್ರಹ ವಾಚಕರ ಕಣ್ಮುಂದೆ ನಿಲ್ಲಲಿ ಎಂಬ ಉದ್ದೇಶದಿಂದ ಅವರ ಅಮೃತವಾಣಿಗಳನ್ನಿಲ್ಲಿ ಉದ್ಧರಿಸಲಾಗಿದೆ.

'ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆನಗಾಯಿತ್ತಯ್ಯಾ,
ಅಕಟಕಟಾ, ಸಂಸಾರ ವೃಥಾ ಹೋಯಿತ್ತಯ್ಯಾ, ಇವ
ತಪ್ಪಿಸಿ ಎನ್ನುವ ರಕ್ಷಿಸಯ್ಯಾ', 'ಇಂದಿಂಗೆಂತು
ನಾಳಿಂಗೆಂತು ಎಂದು ಬೆಂದ ಒಡಲ ಹೊರೆಯ
ಹೋಯಿತ್ತೆನ್ನ ಸಂಸಾರ' 'ಅಱಿಯದೆ ಜನನಿಯ
ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ! ಹುಟ್ಟಿತ್ತೆ
ತಪ್ಪಾಯಿತ್ತೆ ಎಲೆ ಲಿಂಗವೆ?' ಎನ್ನ ಚಿತ್ತವು ಅತ್ತಿಯ
ಹಣ್ಣು ನೋಡಯ್ಯ; ವಿಚಾರಿಸಿದೊಡೆ ಏನೂ
ಹುರುಳಿಲ್ಲವಯ್ಯಾ!' 'ಎನ್ನ ನಡೆಯೊಂದು ಪರಿ, ಎನ್ನ
ನುಡಿಯೊಂದು ಪರಿ, ಎನ್ನೊಳಗೇನೂ ಶುದ್ಧವಿಲ್ಲ
ನೋಡಯ್ಯ' 'ಕೊಂಬೆಯ ಮೇಲಣ ಮರ್ಕಟನಂತೆ
ಲಂಘಿಸುವುದೆನ್ನ ಮನವು ನಿಂದಲ್ಲಿ ನಿಲಲೀಯದೆನ್ನ
ಮನವು' 'ತನ್ನ ವಿಚಾರಿಸಲೊಲ್ಲದು; ಇದಿರ ವಿಚಾರಿಸ
ಹೋಹುದೀ ಮನವು! ಏನ ಮಾಡುವೆನೀ ಮನವನು!
ಎಂತ ಮಾಡುವೆನೀ ಮನವನು'; 'ವಿಕಳನಾದೆನು
ಪಂಚೇಂದ್ರಿಯ ಧಾತುವಿ ನಿಂದ, ಮತಿಗೆಟ್ಟನು ಮನದ
ವಿಕಾರದಿಂದ 'ಧೃತಿಗೆಟ್ಟನು ಕಾಯವಿಕಾರದಿಂದ'

ಎಂದು ಬಸವಣ್ಣನವರು ತಮ್ಮ ಅವಗುಣಗಳನ್ನು ಪದರ ಪದರವಾಗಿ ವಿಂಗಡಿಸಿ, ತಮ್ಮ ಹೃದಯವನ್ನು ಬಿಚ್ಚಿ, ಸಂಗಮನಾಥನಿಗೆ ನಿವೇದಿಸಿಕೊಳ್ಳು ತ್ತಾರೆ. 'ಎನ್ನ ತಪ್ಪು ಅನಂತ ಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ' ಎಂದು ಹೇಳಿಕೊಳ್ಳುವ ಆಧ್ಯಾತ್ಮಿಕ ಸ್ಥೈರ್ಯ ಬಸವಣ್ಣ ನಿಗೆ ಮಾತ್ರ ಮೀಸಲು. ಈ ಮಾತಿನಲ್ಲಿ ಪಶ್ಚಾತ್ತಾಪದ ದನಿಯಿದೆ, ತಪ್ಪೊಪ್ಪಿಕೆಯ ಅಳಲಿದೆ, ನಿಷ್ಕಪಟದ ಮೊರೆಯಿದೆ.

ಭಕ್ತನಿಗೆ ಬಹಿರಂಗ ಶುದ್ಧಿ ಬೇಕು, ನಿಜ; ಅಂತರಂಗ ಶುದ್ಧಿ ಅದಕ್ಕಿಂತ ಮುಖ್ಯ; ಅದಿಲ್ಲದವರಿಗೆ ಶಿವನೊಲಿಯುವುದಿಲ್ಲವೆಂದು ಅವರು ಮೇಲಿಂದ ಮೇಲೆ ಸ್ಪಷ್ಟಪಡಿಸುತ್ತಾರೆ. 'ಭಾವಶುದ್ಧನಾದರೆ ಕೂಡಲಸಂಗಯ್ಯನು ಇತ್ತ ಬಾಯೆಂದೆತ್ತಿ ಕೊಳ್ಳನೇಕಯ್ಯ' ಎಂದವರು ಭಾವಶುದ್ಧಿಯ ಅಗತ್ಯವನ್ನು ಒತ್ತಿ ಹೇಳುತ್ತಾರೆ. ಕೂಡಲಸಂಗಯ್ಯ ತಮಗೊಲಿಯದಿದ್ದಾಗ 'ಸಹಜಗುಣವೆನ್ನಲಿಲ್ಲಯ್ಯ; ನಿಜಭಕ್ತಿಯೆನಗಿಲ್ಲ' ಎಂದು ತಮ್ಮನ್ನು ತಾವು ಜರೆದುಕೊಳ್ಳುತ್ತಾರೆಯೇ ಹೊರತು, ಸಂಗಯ್ಯನನ್ನು ನಿಂದಿಸುವುದಿಲ್ಲ. ತಮ್ಮ ಅವಗುಣಗಳು ತೊಲಗದಿದ್ದಾಗ, ಅವುಗಳಿಂದ ತಮ್ಮನ್ನು ಮುಕ್ತಗೊಳಿಸುವಂತೆ ಅವರು ಸಂಗಯ್ಯನಲ್ಲಿ ಮೊರೆಯಿಡುತ್ತಾರೆ; ಬೇಡಿ, ಬೇಡಿ ಹಂಬಲಿಸಿ ಕಂಬನಿಗೆರೆಯುತ್ತಾರೆ.

*ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ;*
*ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ,*
*ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,*
*ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ*
*ಸಲಹಯ್ಯ*

ಎಂದು ಒರಲುತ್ತಾರೆ. ಮಾನವನ ಇಚ್ಛಾಸ್ವಾತಂತ್ರ ಹಾಗೂ ಭಗವಂತನ ಅನುಗ್ರಹದಲ್ಲಿ ಅವರಿಗೆ ಅಪಾರ ವಿಶ್ವಾಸವುಂಟು. ಆ ಇಚ್ಛಾಸ್ವಾತಂತ್ರ್ಯವೂ ಭಗವಂತನ ಅನುಗ್ರಹದಿಂದಲೇ ಪ್ರಾಪ್ತವಾದದ್ದು. ಮನುಷ್ಯ ತನ್ನನ್ನು ತಾನರಿಯಬೇಕು, ಅದಕ್ಕಾಗಿ ಅನವರತ ಸಾಧನೆ ಮಾಡಬೇಕು, ಇದು ಇಚ್ಛಾಸ್ವಾತಂತ್ರ್ಯದ ಗುರಿ. ಸಾಧನಾನಿರತನಾದ ಭಕ್ತನ ಮನಸ್ಸನ್ನು ಭಗವಂತ ಹೆಜ್ಜೆಹೆಜ್ಜೆಗೂ ಪರೀಕ್ಷಿಸುತ್ತಾನೆ. ಸ್ವಸಾಮರ್ಥ್ಯದಿಂದ, ಸ್ವಶ್ರಮದಿಂದ, ಆತ್ಮಸಂಯಮದಿಂದ, ನಿರಂತರ ಸಾಧನೆಯಿಂದ ಬಹಿರಂಗ ಅಂತರಂಗ ಶುದ್ಧಿಗಳೆರಡನ್ನು ಅರ್ಜಿಸಬೇಕೆಂಬುದು ಅವರು ಹಾಗು ಶರಣರು ತೋರಿಸಿಕೊಟ್ಟಿರುವ ಮಾರ್ಗ.

ಭಗವದಿಚ್ಛೆಯೇ ಮನುಷ್ಯೇಚ್ಛೆಯಾಗಿ, ಭಗವದನುಗ್ರಹ ಭಕ್ತನ ಸಾಧನೆಯೊಡನೆ ಮೇಳವಿಸಿದಾಗ ಸಿದ್ಧಿ ಪ್ರಾಪ್ತಿಸುತ್ತದೆ.

*ಕಾಯವಿಕಾರ ಕಾಡಿಹುದಯ್ಯಾ ;*
*ಮನೋವಿಕಾರ ಕೂಡಿಹುದಯ್ಯಾ!*
*ಇಂದ್ರಿಯವಿಕಾರ ಸುಳಿವುದಯ್ಯಾ!*
*ಸುಳಿವಿನೊಡನೆ ಸುಳಿವುತ್ತಲಿದ್ದೇನೆ; ಸಿಲುಕಿಸದಿರಯ್ಯಾ!*
*ಅನ್ಯಚಿತ್ತವಿರಿಸದಿರಯ್ಯಾ; ನಿಮ್ಮ ಚಿತ್ತವಿರಿಸಯ್ಯಾ!*

ಎಂದು ಬಸವಣ್ಣನವರು ಸಂಗಮನಾಥನಿಗೆ ಮೊರೆಯಿಡುತ್ತಾರೆ, ಶ್ರಮಿಸಿಯೂ ಇಂದ್ರಿಯಗಳು ಹತೋಟಿಗೆ ಬರದಿದ್ದಾಗ, ಸಂಸಾರದ ದಂದುಗ ಹಿಂಗದಿದ್ದಾಗ 'ಹುಟ್ಟಿತ್ತೆ ತಪ್ಪಾಯಿತ್ತೆ, ಎಲೆ ಲಿಂಗವೆ!' ಎಂದು ಕೊರಗುತ್ತಾರೆ. 'ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟಡೆ ನಿಮ್ಮ ನಗುವರಯ್ಯಾ; ಶಿವಬಟ್ಟೆಯಲೆನ್ನನಿರಿಸಯಾ ಹರನೆ' ಎಂದು ಸಲುಗೆಯಿಂದವರು ಹರನನ್ನು ಕಾಡುತ್ತಾರೆ.

ಏಕೆ ಹುಟ್ಟಿಸಿದೆ ಇಹಲೋಕದುಃಖಿಯ ?
ಏಕೆ ಹುಟ್ಟಿಸಿದೆ ಪರಲೋಕ ದೂರನ ?
ಏಕೆ ಹುಟ್ಟಿಸಿದೆ ಕೂಡಲಸಂಗಮದೇವ ಕೇಳಯ್ಯಾ?

ಎನಗಾಗಿ ಮತ್ತೊಂದು ತರುಮರನಿಲ್ಲವೆ ?

ಎಂದವರು ಚರಾಚರ ವಸ್ತುಗಳು ಪ್ರತಿಧ್ವನಿಸುವಂತೆ, ಸಮಸ್ತ ಜೀವಿಗಳು ಕನಿಕರಗೊಳ್ಳುವಂತೆ ಆರ್ತನಾದ ಮಾಡುತ್ತಾರೆ. ಶಿವನೊಲಿದರೆ ಮಾತ್ರ ಕೊರಡು ಕೊನರುತ್ತದೆಂಬ, ಬರಡು ಹಯನಾಗುತ್ತದೆಂಬ, ತನಗೆ ಸಾಕ್ಷಾತ್ಕಾರವಾಗುತ್ತದೆಂಬ ದಿವ್ಯಶ್ರದ್ಧೆ ಅವರಿಗಿದೆ. ಸಂಸಾರದೊಳಗಿರುವಾಗ ಲೋಭ ಮೋಹ ಅಮಿಷಗಳು ಮಾನವನನ್ನು ಸುತ್ತಮುತ್ತ ಮುತ್ತುತ್ತವೆ; ತುಸು ಸಡಿಲಬಿಟ್ಟರೆ ಸಾಕು, ಇಂದ್ರಿಯಗಳು ಅವನನ್ನು ವಶಪಡಿಸಿಕೊಂಡು, ಅವನನ್ನು ಕಾಡಿದೂಡಿ ರೋಡಾಡಿ, ಅವನ ಸಾಧನೆಯನ್ನು ಭಗ್ನಗೊಳಿಸುತ್ತವೆ; ಅವನು ಒಂದು ಹೆಜ್ಜೆ ಮುಂದೆ ಹೋದರೆ, ಅವು ಅವನನ್ನು ನಾಲ್ಕು ಹೆಜ್ಜೆ ಹಿಂದಕ್ಕೆಳೆಯುತ್ತವೆ. ಅಂಥದೊಂದು ಸಂದರ್ಭದಲ್ಲಿ ನೆಚ್ಚುಗೆಡುವ ಎದೆಯಿಂದ ಆತ್ಮರಸವೇ ಉಕ್ಕಂದವಾಗಿ ಹರಿದ ಈ ಸ್ತೋತ್ರ ಎಂಥ ಪಾಪಿಯನ್ನಾದರೂ ಶಿವನ ಕಡೆಗೆ ತಿರುಗಿಸಬಹುದೆಂದು ಭಾವಿಸಬಹುದಾಗಿದೆ.

*ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ*
*ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ*
*ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ*
*ನಿಮ್ಮ ಶರಣರ ಪಾದವಲ್ಲದೆ*
*ಅನ್ಯವಿಷಯಕ್ಕೆಳಸದಂತೆ ಇರಿಸು, ಕೂಡಲಸಂಗಮದೇವಾ*

ಮಹಾತ್ಮಾ ಗಾಂಧೀಜಿ ತಮ್ಮ ಬಳಿ ಸದಾ ಇರಿಸಿಕೊಂಡಿದ್ದ ಮೂರು ಮಂಗಗಳ ಪ್ರತಿಮೆಗಳನ್ನು ಈ ಎದೆಯ ದನಿ ನೆನಪಿಗೆ ತಂದು ಕೊಡುತ್ತದೆ. ಲೋಭಮೋಹಗಳು ಮಾನವನ ಸ್ವಭಾವದಲ್ಲಿಯೇ ಬೇರುಬಿಟ್ಟಿವೆ ನಿಜ. ಆದರವು ಪ್ರಚೋದನೆಯಿಲ್ಲದೆ, ಕಾರಣವಿಲ್ಲದೆ ತಲೆಯೆತ್ತುತ್ತವೆಯೆ? ಸಮುದ್ರದ ಭರತಕ್ಕೆ ಯಾರು ಕಾರಣ? ಚಂದ್ರೋದಯವಲ್ಲವೆ? ಬೆಳೆಗಳಿಗೆ ಯಾರು ಕುತ್ತ? ಕಳೆ ಕೀಟಗಳಲ್ಲವೆ? ಆ ಕಳೆಕೀಟಗಳನ್ನು ಸೃಷ್ಟಿಸಿದವರು ಯಾರು? ಇನ್ನು ಗುರಿ ಕಾಣದ ಪ್ರಾಮಾಣಿಕ ಸಾಧಕನ ಮನಸ್ಸಿನಲ್ಲಿ ಇಂಥ ಪ್ರಶ್ನೆಗಳೇಳುವುದು ಸ್ವಾಭಾವಿಕವೇ?

*ವಿಷಯವೆಂಬ ಹಸುರನೆನ್ನ ಮುಂದೆ ತಂದು*
*ಪಸರಿಸಿದೆಯಯ್ಯಾ*
*ಪಶುವೇನ ಬಲ್ಲುದು, ಹಸುರೆಂದೆಳಸುವುದು*
*ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ*
*ಸುಬುದ್ಧಿಯೆಂಬ ಉದಕವೆಱದು*
*ನೋಡಿ ಸಲಹಯ್ಯ ಕೂಡಲಸಂಗಮದೇವಾ.*

ಹೀಗೆ ತಮ್ಮ ಸಾಧನೆಯ ಅಸಾಫಲ್ಯಕ್ಕೆ ಶಿವನನ್ನೇ ಗುರಿ ಮಾಡಿ, ಪರಿಪರಿಯಾಗಿ ಹಂಬಲಿಸುವ ಭಕ್ತರ ನಡತೆಯನ್ನು ಜಗತ್ತಿನ ಎಲ್ಲ ಸಂತರ ಜೀವನದಲ್ಲಿ ಕಾಣಬಹುದು. ಜಗನ್ಮಾತೆ ಪ್ರತ್ಯಕ್ಷವಾಗುವ ಮುನ್ನ ದಕ್ಷಿಣೇಶ್ವರದ ಪರಮಹಂಸರ ಸಾಧನಾ ಜೀವನದಲ್ಲಿಯೂ ಸುಮಾರು ಇಂಥದೇ ಯಾತನೆಯ ಅನುಭವ ನೆನಪಿಗೆ ಬರುತ್ತದೆ. ಕರೆ ಮೊರೆ, ಬಯಕೆ ಹಂಬಲ, ಕೋಪ ತಾಪ, ತವಕ ವಿರಹ, ನೋವು ನಲಿವು, ಹಿಂಸೆ ತುಮುಲ, ಕೊರಗು ಸೊರಗು, ಭಯ ನಿಂದೆ, ಆವೇಶೋದ್ರೇಕ, ಕುಣಿತ ಮಣಿತ, ನಿರ್ವೇದ ನಿವೇದನೆ, ಹುಚ್ಚು ನೆಚ್ಚು, ತ್ಯಾಗ ವೈರಾಗ್ಯ, ಇವೇ ಮೊದಲಾದ ಚಿತ್ರ ವಿಚಿತ್ರ ಭಾವ ಕ್ರಿಯೆಗಳ ನಿಚ್ಚಣಿಕೆಯ ಮೂಲಕ ಪ್ರತಿಯೊಬ್ಬ ಸಂತನೂ ಸಿದ್ಧಿಯ ಪರಾಕಾಷ್ಠೆಯನ್ನು ಮುಟ್ಟಲೆಳಸುತ್ತಾನೆ. ಬಸವಣ್ಣನವರ ಜೀವನದಲ್ಲಿ ಮಹಾಸಂತನ ಮಹಾನುಭಾವ ಲಕ್ಷಣಗಳೆಲ್ಲ ಸುಸಮೃದ್ಧವಾಗಿವೆಯೆಂಬುದು ಅವರ ವಚನ ಗಳಿಂದ ಸ್ಪಷ್ಟಗೋಚರವಾಗುತ್ತದೆ. ಆತ್ಮ ಶೋಧನೆ, ಆತ್ಮ ನಿರೀಕ್ಷೆ, ಭಾವೋನ್ನತಿ, ಅನುಭಾವ ವೈಭವ ಹಾಗೂ ಕಾವ್ಯ ಲಕ್ಷಣಗಳಿಂದ ಸಮೃದ್ಧವಾಗಿರುವ ಬಸವಾದಿ ಶರಣರ ವಚನಗಳು ಜಗತ್ತಿನ ಸಂತ ಸಾಹಿತ್ಯಕ್ಕೆ ಕಳಸಪ್ರಾಯವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ.

ಬಸವಣ್ಣನವರ ಕಾಲದ ಸ್ತ್ರೀಸಂತರಲ್ಲಿ ಮಹದೇವಿಯಕ್ಕನಿಗೆ ಅಗ್ರಸ್ಥಾನವಿದೆ. ಅವಳು ಸಹ ಅಣ್ಣನವರಂತೆ ಕಾಳರಾತ್ರಿಯ ಕಷ್ಟಕ್ಲೇಶಗಳನ್ನನುಭವಿಸಿ ಚನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂದು ಸಂಕಲ್ಪ ಮಾಡಿಕೊಂಡು, ಅವನ ದರ್ಶನಕ್ಕಾಗಿ ಹಗಲಿರುಳು ಸತತವಾಗಿ ಧ್ಯಾನಿಸುತ್ತಾಳೆ, ಹಲುಬುತ್ತಾಳೆ, ಆಕ್ರಂದಿಸುತ್ತಾಳೆ. ಅರಮನೆ, ಐಸಿರಿ, ರಾಣಿತನ, ಭೋಗ ವೈಭವಗಳ ರೂಪದಲ್ಲಿ ತನ್ನನ್ನು ವಿಭ್ರಮಗೊಳಿಸಿದ ಸೈತಾನ ಶಕ್ತಿಯನ್ನು ಗೆದ್ದು, ಅಂಗದ ಮೋಹವನ್ನು ತ್ಯಜಿಸಿ, ಲಿಂಗ ಸಾಕ್ಷಾತ್ಕಾರವನ್ನು ಬಯಸಿ, ಕೇಶಾಂಬರಿಯಾಗಿಯೇ ಅನುಭವ ಮಂಟಪವನ್ನು ಹೊಕ್ಕು, ಸರ್ವಶರಣರ ಗೌರವಾದರಗಳಿಗೆ ಪಾತ್ರಳಾಗಿ, ಕೊನೆಗೆ ಶ್ರೀಶೈಲದ ಕದಳಿ ವನದಲ್ಲಿ ಚನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ ಪಡೆಯುತ್ತಾಳೆ. ಆ ಸಾಕ್ಷಾತ್ಕಾರಕ್ಕೆ ಮುನ್ನ ಅವಳು ಪಟ್ಟ ಪಾಡು ಮರ್ತ್ಯ ಸಾಮಾನ್ಯರಿಗೆ ಅಸದಳವಾದದ್ದು. ಆ ಸುಂದರಿ ಕೈಬೀಸಿ ಕರೆಯುತ್ತಿದ್ದ ಭೋಗ ಮಾಯೆಯನ್ನು ಧಿಕ್ಕರಿಸಿ, ಯಾರ ಹಂಗಿಗೂ ಕೈಯೊಡ್ಡದೆ ಪರದೇಶಿಯಂತೆ ಅಲೆಯುತ್ತಾಳೆ.





*ಹಸಿವಾದಡೆ ಭಿಕ್ಷಾನ್ನಗಳುಂಟು.*
*ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು*
*ಶಯನಕ್ಕೆ ಹಾಳು ದೇಗುಲಗಳುಂಟು*
*ಚೆನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು*

ಎಂದು ಅವನನ್ನವಳು ಹುಡುಕಿಕೊಂಡು ಹೋಗುತ್ತಾಳೆ; ಅವನನ್ನು ತೋರಿಸುವಂತೆ ವಿಪಿನದ ಖಗ ಮೃಗ ತರುಗುಲ್ಮಾದಿಗಳಿಗೆ ಕೇಳಿದವರ ಎದೆಗರಗುವಂತೆ ಮೊರೆಯಿಡುತ್ತಾಳೆ; ಅವುಗಳನ್ನು ಕಾಡುತ್ತ ಬೇಡುತ್ತ, ನಿಂತಲ್ಲಿ ನಿಲ್ಲದೆ ತೊಳಲುತ್ತಾಳೆ; ಸಚರಾಚರವಸ್ತುಗಳೆಲ್ಲೆಲ್ಲ ಚೆನ್ನಮಲ್ಲಿಕಾರ್ಜುನನ್ನೇ ಕಾಣಲಾಶಿಸುತ್ತಾಳೆ.

*ವನವೆಲ್ಲ ನೀವೆ*
*ವನದೊಳಗಣ ದೇವತರುವೆಲ್ಲ ನೀವೆ,*
*ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ*
*ಚೆನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ*
*ಎನಗೇಕೆ ಮೊಗದೋರೆ ?*

ತನ್ನ ಪ್ರೀತಿಯ ನಲ್ಲ ಎಲ್ಲೆಲ್ಲು ಇದ್ದಾನೆಂಬುದು ಅವಳಿಗೆ ಸೂರ್ಯಚಂದ್ರಾದಿಗಳಷ್ಟೆ ಸುಸ್ಪಷ್ಟ. ತಾನೆಷ್ಟು ಮೊರೆಯಿಟ್ಟರೂ ಅವನು ಪ್ರತ್ಯಕ್ಷನಾಗದಿದ್ದಾಗ, ಅವಳಿಗೆ ನಿರಾಶೆಯಾಗದು; ಅವನು ಬಂದಾಗ ಬರಲಿ ಎಂಬ ತಾಳ್ಮೆ ಅಥವಾ ದಿವ್ಯ ನಿರ್ಲಕ್ಷ್ಯದಿಂದ ಧ್ಯಾನ ಜಪ ತಪಗಳೇ ತನ್ನ ಕರ್ತವ್ಯವೆಂದು ತಿಳಿದು ಅವಳು ಏಕಾಗ್ರತೆಯಿಂದ ಸಾಧನಾನಿರತಳಾಗುತ್ತಾಳೆ. 'ಅಯ್ಯ, ನೀ ಕೇಳಿದರೆ ಕೇಳು ಕೇಳದಿದ್ದರೆ ಮಾಣು; ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ' ಎಂದು ತನ್ನ ಮನಃಸ್ಥಿತಿಯನ್ನು ನಿಷ್ಕಪಟವಾಗಿ ವ್ಯಕ್ತಗೊಳಿಸುತ್ತಾಳೆ; 'ಅಯ್ಯ ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿದ್ದರೆ ಮಾಣು; ನಾನಿನ್ನಪ್ಪಿದಲ್ಲದೆ ಸೈರಿಸಲಾರೆನಯ್ಯ' ಎಂದು ಪರಿತಪಿಸುತ್ತಾಳೆ. ನಿಷ್ಠೆಯಿಂದ ಶ್ರದ್ಧೆಯಿಂದ ಪೂಜಿಸುವುದು ಭಕ್ತಿಯ ಧರ್ಮ; ಮೆಚ್ಚುವುದು, ಬಿಡುವುದು ಭಗವಂತನ ಕರ್ಮ ಎಂಬ ಛಲ, ಸಂಕಲ್ಪ ಆತ್ಮಸ್ಥೈರ್ಯ ಮತ್ತು ಅನಾಸಕ್ತಿಗಳು ಅವಳ ಈ ಅಪೂರ್ವ ವಚನದಲ್ಲಿ ಅಭಿವ್ಯಕ್ತಗೊಳ್ಳುತ್ತವೆ; ಅವಳ ಸ್ಥಿತಪ್ರಜ್ಞೆಗೆ ಇದೊಂದು ಸುಸ್ಪಷ್ಟ ನಿದರ್ಶನ. ಆಧ್ಯಾತ್ಮ ಸಾಧನೆಯೂ ಒಂದು ಸಾಹಸ ಯಾತ್ರೆ, ಜಗದ್ವಿಜಯಿಗಿಂತ ಇಂದ್ರಿಯ ವಿಜಯಿಯೇ ಮಹಾಸಾಹಸಿಯೆಂಬ ತಿಳುವಳಿಕೆ ಸತ್ಯವೆಂಬುದಕ್ಕೆ ಈ ಮಹಾತಾಯಿಯ ಬದುಕೇ ಒಂದು ಜಾಜ್ವಲ್ಯ ಸಾಕ್ಷಿ. ಆಧ್ಯಾತ್ಮ ಸಾಧಕನಿಗೆ ನಿರಾಶೆಯೆಂಬುದೇ ಇಲ್ಲ; ಆದರೂ ದೀರ್ಘಕಾಲದ ಸಾಧನೆಯಿಂದ ಬಳಲಿದಾಗಲೂ ಆರಾಧ್ಯದೈವದ ಅನುಗ್ರಹ ದೃಷ್ಟಿ ತನ್ನ ಮೇಲೆ ಹರಿಯದಿದ್ದಾಗ, ವಿರಹ ತಾಪ ತೀವ್ರವಾಗಿ, ಉನ್ಮಾದ ಎಲ್ಲೆ ಮೀರಿ, ತಳಮಳಗುಡುವುದಂತು ಸಹಜವೇ. ಅಂಥ ದೈವೋನ್ಮಾದ ಎಲ್ಲ ಸಂತರಲ್ಲಿಯೂ ಕಂಡುಬರುವ ವಿಶಿಷ್ಟ ಗುಣ.

*ಚಿಲಿಮಿಲಿಯೆಂದೋದುವ ಗಿಳಿಗಳಿರಾ, ನೀವು*
*ಕಾಣಿರೆ, ನೀವು ಕಾಣಿರೆ ?*
*ಸರವೆತ್ತಿ ಪಾಡುವ ಗೋಗಿಲೆಗಳಿರಾ, ನೀವು ಕಾಣಿರೆ*
*ನೀವು ಕಾಣಿರೆ?*
*ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ*
*ನೀವು ಕಾಣಿರೆ?*
*ಕೊಳನ ತಡಿಯೊಳಾಡುವ ಹಂಸಗಳಿರಾ, ನೀವು*
*ಕಾಣೀರಿ, ನೀವು ಕಾಣಿರೆ?*
*ಗಿರಿಗಹ್ವರದೊಳಾಡುವ ನವಿಲುಗಳಿರಾ, ನೀವು*
*ಕಾಣಿರೆ, ನೀವು ಕಾಣಿರೆ?*
*ಚೆನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ?*

ಈ ನಿಸರ್ಗಶಿಶು ಮಹದೇವಿಯಕ್ಕ ನಿಸರ್ಗಶಕ್ತಿ ಚೆನ್ನಮಲ್ಲಿಕಾರ್ಜುನನನ್ನು ಕಾಣುವ ಸಲುವಾಗಿ, ನಿಸರ್ಗ ಶಕ್ತಿಗಳನ್ನೇ ಆಶ್ರಯಿಸುತ್ತಾಳೆ.

ಲಿಂಗಭೇದವಳಿದು ಲಿಂಗಕಳೆ ಸಮನಿಸಿದಾಗ ಭಕ್ತನಿಗೆ ಸಿದ್ಧಿ ಕೈಗೂಡಿದಂತಾಗುತ್ತದೆ. ಆ ಮಟ್ಟಕ್ಕೇರಿದಾಗ ಅವನು 'ಶಿವೋಹಂ' ಎಂದು ಸದಾ ಸರ್ವತ್ರ ಶಿವನನ್ನೇ ಕಾಣುತ್ತಾನೆ. ತಾನಾರೆಂಬುದು ಗೊತ್ತಾದಾಗಲೇ ಅವನಲ್ಲಿ ಶಿವಭಾವ ಅಂಕುರಿಸಿ ಪಲ್ಲವಿಸುತ್ತದೆ. 'ಏನಾದಡೆಯೂ ಸಾಧಿಸಬಹುದು.. ತಾನಾರೆಂಬುದ ಸಾಧಿಸಬಾರದು' ಎಂಬ ಬಸವಣ್ಣನವರ ವಾಣಿಯ ಪ್ರಕಾರ ಮಾನವ ತನ್ನ ನಿಜಸ್ಥಿತಿಯನ್ನರಿತಾಗಲೇ ಸಿದ್ಧಿ. 'ಎಲ್ಲ ಎಲ್ಲವನರಿದು ಫಲವೇನಯ್ಯ, ತನ್ನ ತಾನರಿಯಬೇಕಲ್ಲದೆ? ಎಂದು ಮಹದೇವಿಯಕ್ಕ ನುಡಿದರೆ, 'ತನ್ನ ತಾನರಿದವಂಗೆ ಅರಿವೆ ಗುರು' ಎಂದು ಮತ್ತೊಬ್ಬ ಸಂತ ಸತಿ ಮುಕ್ತಾಯಕ್ಕ ಸ್ಪಷ್ಟಪಡಿಸುತ್ತಾಳೆ. ತನ್ನನ್ನು ತಾನರಿತಾಗ, ಶಿವನೇ ಶಿವನಾದಾಗ ಭಕ್ತನಲ್ಲಿ ಶಿವನನ್ನೇ ಕೆಣಕುವ ಆತ್ಮಪ್ರತ್ಯಯ ಮೂಡುತ್ತದೆ.

*ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ;*
*ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ.*
*ನೀನು ಜಗಕ್ಕೆ ಬಲ್ಲಿದನು; ಅನು ನಿನಗೆ ಬಲ್ಲಿದನು,*
*ಕಂಡಯ್ಯ;*
*ಕರಿಯು ಕನ್ನಡಿಯೊಳಡಗಿದಂತಯ್ಯಾ*

ಶಿವಭಾವ ಭಕ್ತನ ಮನಸ್ಸನ್ನೆಲ್ಲ ವ್ಯಾಪಿಸಿಕೊಂಡಾಗ ಭೇದ ಭಾವಗಳೆಲ್ಲ ಸಂಪೂರ್ಣವಾಗಿ ಅಳಿದು ಹೋಗುತ್ತವೆ.

ಅಂಥ ಸಿದ್ಧಿಯ ಪೂರ್ವದ ಭಕ್ತನ ಸ್ಥಿತಿ ಭಕ್ತಿ ಭಂಡಾರಿ ಬಸವಣ್ಣನವರ ಸ್ವಾನುಭವದಲ್ಲಿ ನಿಚ್ಚಳವಾಗಿ ಮೈದೋರಿದೆ.

ಮನ ಮನ ಬೆರೆಸಿದಲ್ಲಿ ತನು ಕರಗದಿದ್ದಡೆ,
ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದಡೆ,
ಕಂಡಾಗಳಶ್ರು ಜಲಂಗಳು ಸುರಿಯದಿದ್ದಡೆ,
ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ
ಕೂಡಲಸಂಗಮದೇವರ ಭಕ್ತಗಿದು ಚಿಹ್ನವೆ ?

ಆಧ್ಯಾತ್ಮ ಯಾತ್ರೆಯಲ್ಲಿ ಇವೆಲ್ಲ ಒಂದೊಂದು ಮಜಲು. ಇಲ್ಲಿನ್ನೂ ದ್ವೈತಭಾವದ ಸೋಂಕಿದೆ; ಅದು ತೊಟ್ಟು ಕಳಚಿ ಕೊಂಡು ಉದುರುವ ಅಥವಾ ಅದ್ವೈತದಲ್ಲಿ ಲೀನವಾಗುವ ಸ್ಥಿತಿಯಲ್ಲಿದೆ. ಬರಬರುತ್ತ ಅಂಗೈಯೊಳಗಣ ಲಿಂಗದ ಕಳೆ ಹೃದಯವನ್ನು ಹೋಗುತ್ತದೆ; ಕುರುಹು ಅರುಹಾಗುತ್ತದೆ; ಆಗ ಬಾಹ್ಯಾಚರಣೆಗಳೆಲ್ಲ ಸ್ಥಗಿತಗೊಳ್ಳುತ್ತವೆ; ಸೇವ್ಯ ಸೇವಕ, ಜ್ಞೇಯ ಜ್ಞಾತೃಗಳೆಲ್ಲರೂ ಒಂದಾದ ನಂತರ ಕಟ್ಟುಕಟ್ಟಳೆಗಳೆಲ್ಲ ಹರಿದುಹೋಗುತ್ತವೆ.

*ಕಂಗಳು ತುಂಬಿದ ಬಳಿಕ ನೋಡಲಿಲ್ಲ*
*ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ*
*ಕೈಗಳು ತುಂಬಿದ ಬಳಿಕ ನೆನೆಯಲಿಲ್ಲ,*
*ಮನ ತುಂಬಿದ ಬಳಿಕ ನೆನೆಯಲಿಲ್ಲ,*
*ಮಹಂತ ಕೂಡಲಸಂಗಮದೇವನ.*

ಅರಿವು ಮಸುಗಿ, ಕುರುಹು ಮರೆಯಾದ ಬಳಿಕ ಅರ್ಚನೆ ಸ್ತುತಿಗಳಿಗೆ ಅರ್ಥವೇ ಇರುವುದಿಲ್ಲ; ಇದರಲ್ಲಿ ಅರ್ಥದ ಪ್ರಶ್ನೆಯೂ ಏಳದು; ಏಕೆಂದರೆ, ಭಕ್ತನೇ ಶಿವನಾದಾಗ ಅವನ ಪರಮ ಗುರಿ ಸಿದ್ಧಿಸಿದಾಗ ಅವನ ಕರ್ಮಗಳೆಲ್ಲ ಲಯವಾಗುತ್ತವೆ; ರೂಪ ತಳೆದಿದ್ದ ಬಯಲು ಮತ್ತೆ ಬಯಲಾಗುತ್ತದೆ; ಬೆಳಗು ಮಹಾ ಬೆಳಗಿನಲ್ಲಿ ಕೂಡಿಕೊಳ್ಳುತ್ತದೆ.

ಅಱಿವನ್ನಕ್ಕರ ಅರ್ಚಿಸಿದೆ, ಅಱಿವನ್ನಕ್ಕರ ಪೂಜಿಸಿದೆ,
ಅಱಿವನ್ನಕ್ಕರ ಹಾಡಿ ಹೊಗಳಿದೆ,
ಅಱಿವುಗೆಟ್ಟು ಮಱಹು ನಷ್ಟವಾಗಿ
ಭಾವ ನಿರ್ಭಾವವಾಗಿ ನಿಜವೊಳಕೊಂಡಿತ್ತಾಗಿ
ಕೂಡಲಸಂಗಯ್ಯನಲ್ಲಿ ಸರ್ವ ನಿವಾಸಿಯಾಗಿರ್ಪೆನು.

ಕೂಡಲಸಂಗಯ್ಯನಲ್ಲಿ ಭಕ್ತನಿವಾಸಿಯಾಗಿದ್ದನೆಂದರೂ ಒಂದೇ, ಭಕ್ತನಲ್ಲಿ ಕೂಡಲಸಂಗಮ ನಿವಾಸಿಯಾಗಿದ್ದಾನೆಂದರೂ ಒಂದೇ. ಮಹದೇವಿಯಕ್ಕನ ಮಾತಿನಲ್ಲಿ ಹೇಳುವು ದಾದರೆ 'ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ, 'ಸರ್ವತ್ರ ಕಲ್ಯಾಣವೇ ಕಂಗೊಳಿಸುತ್ತದೆ. 'ಹೊರಗಣ ಚಿಂತೆ ಧ್ಯಾನ ಮೌನ ಜಪತಪವೇಕೊ ತನ್ನ ತಾನರಿದ ಶರಣಂಗೆ ಗೊಹೇಶ್ವರಾ' ಎಂಬ ಪ್ರಭುದೇವರ ಮಾತು ಸಹ ಮೇಲಣ ನಿಜವನ್ನೆ ಸಾರುತ್ತದೆ, 'ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವ'- ಇವು ಸಿದ್ಧಿಯಿಂದ ಲಭಿಸುವ ಫಲಗಳು. 'ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ' – ಇದೇ ಪರಮಸುಖ, ಇದೇ ಜೀವನ ಧ್ಯೇಯ. 'ತನ್ನ ತಾನಱಿದಡೆ ನುಡಿಯೆಲ್ಲ ತತ್ವ ನೋಡಾ' ಎಂದು ಪ್ರಭುದೇವರು ಹೇಳುವಾಗ ಸಂತರ ವಾಣಿಯೆಲ್ಲ ದೇವವಾಣಿಯೆ ಆಗುತ್ತದೆ; ಅಂಥ ಮಾತು ಜ್ಯೋತಿರ್ಲಿಂಗವಾಗುತ್ತದೆ. ಅನುಭಾವದ ಆಧಾರವಿಲ್ಲದೆ ಅರಿವು ಸಾಧ್ಯವಿಲ್ಲವೆಂದೇ ಬಸವಣ್ಣನವರು ಹೇಳುತ್ತಾರೆ. ಪಾಂಡಿತ್ಯ ಜ್ಞಾನವಾಗಲಾರದು. ಆದ್ದರಿಂದಲೇ 'ನಿಮ್ಮ ನಱಿಯದ ಜ್ಞಾನವೆಲ್ಲಾ ಅಜ್ಞಾನ!ವೆಂಬುದು ಬಸವಣ್ಣನವರ ಹಾಗೂ ಶಿವಶರಣರ ಜೀವನದ ಧ್ಯೇಯ ಸೂತ್ರವಾಗಿದೆ. ಸಕಲ ಜೀವಾವಳಿಗೆ ಲೇಸನ್ನೇ ಬಯಸುವ, ಎಲ್ಲೆಲ್ಲಿಯೂ ಲೇಸನ್ನೇ ಕಾಣುವ, ಲೋಕಕಲ್ಯಾಣವೆ ಧ್ಯೇಯವಾಗುಳ್ಳ ಶಿವಸಂತರ ಜೀವನ ಹಾಗೂ ಅವರ ಸಂದೇಶ ಜಗತ್ತಿನ ಸಂತ ಸಂಸ್ಕೃತಿಯ ಇತಿಹಾಸಕ್ಕೆ ನೀಡಿರುವ ಅಪೂರ್ವ ಕೊಡೆಗೆಗಳೆಂಬುದರಲ್ಲಿ ಸಂದೇಹವಿಲ್ಲ.

–ಮುಂದುವರೆಯುತ್ತದೆ.

## ಸೋಮೇಶ್ವರ ಶತಕ

*ಸವಿವಣ್ಣಲ್ಲಿನಿಮಾವು ಸರ್ವರಸದೊಳ್ ಶೃಂಗಾರ*
*ಸಂಭಾರದೊಳ್ ।*
*ಲವಣಂ ಕೇಳಲು ಬಾಲಭಾಷೆ ಸಿರಿಯಲ್ಲಾರೋಗ್ಯ*
*ದೈವಂಗಳೊಳ್ ॥*
*ಶಿವ ಬಿಲ್ಲಾಳ್ಗಳೊಳಂಗಜಂ ಜನಿಸುವಾ*
*ಜನ್ಮಂಗಳೊಳ್ ಮಾನುಷಂ ।*
*ಕವಿತಾವಿದ್ಯೆ ಸುವಿದ್ಯೆಯೊಳ ಹರಹರಾ*
*ಶ್ರೀ ಚೆನ್ನಸೋಮೇಶ್ವರಾ ॥*

ರುಚಿಯಾದ ಹಣ್ಣುಗಳಲ್ಲಿ ಸಿಹಿ ಮಾವೂ, ನವರಸಗಳಲ್ಲಿ ಶೃಂಗಾರವೂ, ಸಂಭಾರಗಳಲ್ಲಿ ಉಪ್ಪು, ಮಾತುಗಳಲ್ಲಿ ಎಳೆಯ ಮಕ್ಕಳ ಮಾತೂ, ಭಾಗ್ಯಗಳಲ್ಲಿ ಆರೋಗ್ಯಭಾಗ್ಯವೂ, ದೇವರುಗಳಲ್ಲಿ ಶಿವನೂ, ಬಿಲ್ಲನ್ನು ಹಿಡಿದು ಯುದ್ಧ ಮಾಡುವ ಶೂರರಲ್ಲಿ ಮನ್ಮಥನೂ, ಜನ್ಮಗಳಲ್ಲಿ ಮನುಷ್ಯ ಜನ್ಮವೂ, ವಿದ್ಯೆಗಳಲ್ಲಿ ಕವಿತ್ವ ವಿದ್ಯೆಗೂ ಶ್ರೇಷ್ಠವಾದುವು.





# 'ಮಾತೃ ಹೃದಯಿ ಅಕ್ಕನಾಗಮ್ಮ'

-ಯು.ಎನ್. ಸಂಗನಾಳಮಠ, 'ಜ್ಯೋತಿರ್ಲಿಂಗ', ಶಿವಯೋಗ ರಸ್ತೆ, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ-೫೭೭ ೨೧೭

'ದೇವರು ಜಗತ್ತಿನಲ್ಲಿ ಎಲ್ಲ ಕಾಲದಲ್ಲಿಯೂ ಎಲ್ಲ ಸ್ಥಳಗಳಲ್ಲಿಯೂ ಇರಲಿಕ್ಕೆ ಸಾಧ್ಯವಿಲ್ಲ. ಅದಕ್ಕಾಗಿ ಈ ಜಗತ್ತಿನಲ್ಲಿ ತಾಯಿಯನ್ನು ಸೃಷ್ಟಿಸಿದ' ಎಂದು ಆರ್ನಾಲ್ಡ್ ಬೆನೆಟ್ ಹೇಳಿದ್ದಾನೆ. ಈ ಮಾತು ಅಕ್ಷರಶಃ ತಾಯಿ ಅಕ್ಕನಾಗಮ್ಮನವರಿಗೆ ಅನ್ವಯಿಸುವುದು.

ಅಕ್ಕನಾಗಮ್ಮ ಬಸವಣ್ಣನವರ ಹಿರಿಯ ಸಹೋದರಿ, ಚನ್ನಬಸವಣ್ಣನವರ ತಾಯಿ. ಬಸವಣ್ಣ ಅಕ್ಕನಾಗಮ್ಮನವರ ಮಾನಸಪುತ್ರ ಎಂದರೂ ತಪ್ಪಾಗಲಾರದು. ಅಕ್ಕನಾಗಮ್ಮನವರ ಪತಿ ಶಿವದೇವ, ಅಥವಾ ಶಿವಸ್ವಾಮಿ ಅಥವಾ ಶಿವರಾಯ. ಆದರೆ ಅಕ್ಕನಾಗಮ್ಮನವಳ ಪತಿಯ ವಿಷಯದಲ್ಲಿ ಭಿನ್ನಾಭಿಪ್ರಾಯ ತಲೆದೋರಿದೆ. ಕೆಲವೊಂದು ಕಾವ್ಯದ ಪ್ರಕಾರ ಪತಿ ಕಕ್ಕಯ್ಯ ಎಂದು ಹೇಳಲಾಗಿದೆ. ಆದರೆ ಬಸವ ಪುರಾಣಗಳ ಸಮುದಾಯದಲ್ಲಿ ವಿಶಿಷ್ಟ ಕೃತಿ ಎನಿಸಿದ ಸಿಂಗಿರಾಜ ಪುರಾಣದಲ್ಲಿ ಅಕ್ಕನಾಗಮ್ಮನವರ ಪತಿ ಶಿವಸ್ವಾಮಿ ಎನ್ನಲಾಗಿದೆ. ಕೂಡಲಸಂಗಮಕ್ಕೆ ಹೋದ ಬಸವಣ್ಣನವರು ಎಷ್ಟೇ ಹೇಳಿದರೂ ತಿರುಗಿ ಬಾಗೇವಾಡಿಗೆ ಬಾರದಿದ್ದಾಗ ಅವರ ತಂದೆ ಮಾದರಸನು 'ಸಂಸಾರ ಭ್ರಾಂತಳಿಯದಳಿಯ ಶಿವದೇವ ಮಗಶ್ನಾಗಾಯನಾತಂಗೆ ಸೇವೆಯೋಸುಗ ಮತ್ತು ತಕ್ಕುದಂ ತಕ್ಕುದಂ ಕೊಟ್ಟು ಬಂದರು' ಎಂದು ಸ್ಪಷ್ಟವಾಗಿ ಹೇಳಿದೆ. ಬಸವಣ್ಣ ಮಂತ್ರಿ ಪದವಿ ಪೂಜಿಸಿದಾಗ ಆತನೊಂದಿಗೆ ಗಂಗಾಂಬಿಕೆ, ನೀಲಾಂಬಿಕೆ, ಅಕ್ಕನಾಗಮ್ಮ, ಶಿವಸ್ವಾಮಿ ಇದ್ದರೆಂದು ಸಿಂಗಿರಾಜಪುರಾಣದಲ್ಲಿ ಹೇಳಲಾಗಿದೆ. ಡಾ॥ ಹಳಕಟ್ಟಿಯವರು 'ಅಕ್ಕನಾಗಮ್ಮ ಕೂಡಲಸಂಗಮಕ್ಕೆ ಬಂದ ಸಮಯದಲ್ಲಿ ಚೆನ್ನಬಸವಣ್ಣನ ಜನನವಾಗಿರಬಹುದು. ಅಕ್ಕನಾಗಮ್ಮ ಪತಿ ಶಿವಸ್ವಾಮಿ, ಮಗುವಿನೊಂದಿಗೆ ಇದ್ದರೆಂದು, ಶಿವಸ್ವಾಮಿ ಸಹ ಇಂಗಳೇಶ್ವರ ಗ್ರಾಮದ ನಿವಾಸಿ ಆಗಿರಬಹುದೆಂದು ಅಭಿಪ್ರಾಯ ಪಡುತ್ತಾರೆ.

*ಪತಿ ಶಿವಸ್ವಾಮಿ ಸತಿ ಅಕ್ಕನಾಗಮ್ಮ*
*ಮತಿ ಚನ್ನಬಸವ ಉದಯಿಸಿ । ನಾಡೊಳು*
*ಮತ ವೀರಶೈವ ತಾನ್ವೇಳಿ ।*

ಎಂಬ ಜನಪದ ಗೀತೆ ಗುಲಬರ್ಗಾ ಭಾಗದಲ್ಲಿ ಪ್ರಚಲಿತವಾಗಿದೆ. ಸಿಂಗಿರಾಜನು ಸಂಸಾರ ಭ್ರಾಂತದಳಿದು ಎಂದು ಸಂಬೋಧಿಸಿರುವುದರಿಂದ ಸಂಸಾರ ವ್ಯಾಮೋಹ ಈತನಿಗೆ ಹೆಚ್ಚಾಗಿದ್ದಂತೆ ಊಹಿಸಬಹುದು. ಇದಕ್ಕೆ ತದ್ವಿರುದ್ಧವಾದದ್ದು ಅಕ್ಕನಾಗಮ್ಮನ ಬದುಕು. ಯಾವತ್ತೂ ಇಷ್ಟಲಿಂಗ ಪೂಜೆಯಲ್ಲಿ ಮಗ್ನಳಾಗಿರುವ ಸಜ್ಜನೆ ಸದ್ಗೋಷ್ಠಿಗಳಲ್ಲಿ ಕಾಲ ಕಳೆಯುವ ಶರಣರ ಒಡನಾಡಿಯಾದ ಅಕ್ಕನಾಗಮ್ಮನಿಗೆ ಸಂಸಾರ ಎಂದರೆ ಅಷ್ಟಕ್ಕಷ್ಟೆ ಹೀಗಾಗಿ ಪತ್ನಿ-ಪತಿಯರಿಬ್ಬರು ಒಂದು ಕೂಡಿ ಕಲ್ಯಾಣದಲ್ಲಿ ಇದ್ದಂತೆ ಕಾಣುವುದಿಲ್ಲ. ತಿರುಗಿ ಶಿವಸ್ವಾಮಿ ಕೂಡಲಸಂಗಮಕ್ಕೆ ಹೋಗಿರಬಹುದು.

ಅಕ್ಕನಾಗಮ್ಮನ ವ್ಯಕ್ತಿತ್ವ ಉಪಮಾತೀತವಾದದ್ದು. ಬಸವಣ್ಣನವರ ಬಾಲ್ಯದಿಂದ ಬಾಲ್ಯದಿಂದ ಒಲವಿನ ಸಹೋದರಿಯಾಗಿ, ಎರಡನೆಯ ತಾಯಿಯಾಗಿ, ಗುರುವಾಗಿ, ಮಾರ್ಗದರ್ಶಕಿಯಾಗಿ, ರಕ್ಷಕಿಯಾಗಿ ಸದಾಕಾಲ ಜೊತೆಗಿದ್ದರು. ಬಸವ ಬಸವಣ್ಣ, ಚನ್ನಬಸವಣ್ಣ ಅಕ್ಕನಾಗಮ್ಮ ನೀಲಾಂಬಿಕೆ ಗಂಗಾಂಬಿಕೆ ಇವರು ವಾಸಿಸುವ ಮನೆ 'ಮಹಾಮನೆ' ಎಂದು ಕರೆಯಲ್ಪಡುತ್ತಿತ್ತು. ದಾಸೋಹದ ಮಹಾಮನೆಯಾಗಿತ್ತು. ನಿತ್ಯವೂ ಬರುವ ಗುರು-ಜಂಗಮರಿಗೆ ಪ್ರಸಾದ ಪೂಜೆ ವ್ಯವಸ್ಥೆ ಇದ್ದಿತು. ಅಕ್ಕನಾಗಮ್ಮ ಬಸವಣ್ಣನ ಮೇಲೆ ಮಾತೃಪ್ರೇಮ ಹೊಂದಿದ್ದರು.

*ಬಸವನೆ ಮುಖಸೆಜ್ಜೆ*
*ಬಸವನೆ ಅಮಳೋಕ್ಯ*
*ಬಸವನೆ ನಾನೆತ್ತಿ ಮುದ್ದಾಡಿಸುವೆನು*
*ಬಸವ ಸಂಗನಬಸವ ದೇವಜಯತು*
*ಬಸವಗೂ ಎನಗೂ ಭೇದಭಾವವಿಲ್ಲ*
*ಬಸವಗೂ ಎನಗೂ ಉಂಟು ಬಸವಣ್ಣ ಪ್ರಿಯ*
*ಚೆನ್ನಸಂಗಯ್ಯನಲ್ಲಿ*
*ಬಸವನ ಬೆಸಲಾರೆ ಬಾಣಂತಿ ನಾನಯ್ಯ ಬಸವಣ್ಣ*

ಅಕ್ಕನಾಗಮ್ಮನ ಈ ಅಂತರಂಗದ ನುಡಿ ಮಾತೃಪ್ರೇಮದ ರೂಪದಲ್ಲಿದೆ. ಹಿರಿಯಕ್ಕ, ಹಡೆದ ತಾಯಿ ಸಮ ಸಮ ಭಾವನೆ ಇದೆ. ಮುಂದೆ ಮರ್ತ್ಯಲೋಕದ ಮಹಾಮನೆ ಶೂನ್ಯವಾದಾಗ 'ಎನ್ನನೊಯ್ಯದೆ ಹೋದೆಯಲ್ಲ' ಎಂದು ಅಕ್ಕನಾಗಮ್ಮನ ಮನದಳಲು ಕೋಡಿಯಾಗಿ ಹರಿಯಿತು.

ಅಕ್ಕನಾಗಮ್ಮನವರ ಸಲಹೆಯ ಮೇರೆಗೆ ಬಸವಣ್ಣನವರು 'ಅನುಭವಮಂಟಪ' ಸ್ಥಾಪಿಸಿದರು. ಅಲ್ಲಮಪ್ರಭು ಅನುಭವ ಮಂಟಪದ ಅಧ್ಯಕ್ಷನಾದರೆ, ಚನ್ನಬಸವಣ್ಣನವರು ನಿರ್ವಾಹಕನಾಗಿದ್ದರು. ಅಕ್ಕನಾಗಮ್ಮ ಅನುಭವಮಂಟಪಕ್ಕೆ ಶಕ್ತಿಯಾಗಿದ್ದರು. ಆ ಶಕ್ತಿಯೇ ಅನೇಕ ಶರಣರನ್ನು ತಯಾರಿಸುವ ಕರ್ತಾರನ ಕಮ್ಮಟವಾಗಿತ್ತು. ಅನುಭವ ಮಂಟಪ ವಿಶ್ವದ ಪ್ರಥಮ ಸಂಸತ್ತು ಎನಿಸಿದೆ. ಪ್ರಜಾಪ್ರಭುತ್ವದ ತತ್ವಗಳಾದ ಸ್ವಾತಂತ್ರ್ಯ, ಸಮಾನತೆ, ಸೋದರತ್ವಗಳ ಜೊತೆಗೆ ಕಾಯಕ ದಾಸೋಹ ತತ್ವಗಳನ್ನು ಪರಿಚಯಿಸಿತು. ಅಲ್ಲಿ ಐಹಿಕ, ಪಾರಮಾರ್ಥಿಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡು ಹಿಡಿಯುವ ಚರ್ಚಿಸುವ ವಿಮರ್ಶಿಸುವ ಪರಾಮರ್ಶಿಸುವ ಕಾರ್ಯ ಸದಾಕಾಲ ನಡೆಯುತ್ತಿತ್ತು.

ಅನುಭವ ಮಂಟಪದಲ್ಲಿಯ ಚರ್ಚೆಯ ಫಲಶ್ರುತಿಯಾಗಿ ಜಾತಿ ನಿರ್ಮೂಲನೆ ಪಥದಲ್ಲಿ ಬ್ರಾಹ್ಮಣ ಮತ್ತು ಅಂತ್ಯಜರ ನಡುವಿನ ವಿವಾಹ ಸಂಬಂಧದ ಘಟನೆ ಕಲ್ಯಾಣ ಕ್ರಾಂತಿಯಾಗಿ ಪರಿವರ್ತನೆಯಾಯಿತು. ಈ ಸಮಯದಲ್ಲಿ ಧರ್ಮ ಸಾಹಿತ್ಯ ವಚನಗಳ ರಕ್ಷಣೆಗಾಗಿ ಕೈಯಲ್ಲಿ ಖಡ್ಗ ಹಿಡಿದು ಗಂಡು ಗಚ್ಚೆ ಹಾಕಿ ಕುದುರೆ ಏರಿ ಪ್ರಾಣದ ಹಂಗು ತೊರೆದು ಹೋರಾಡಿದವರಲ್ಲಿ ಅಕ್ಕನಾಗಮ್ಮ, ಗಂಗಾಂಬಿಕೆ ಮೊದಲಿಗರು. ವೀರಗಣಾಚಾರಿ, ಮಡಿವಾಳ ಮಾಚಿದೇವರ ನಾಯಕತ್ವದಲ್ಲಿ ಚೆನ್ನಬಸವಣ್ಣ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯನವರೊಂದಿಗೆ ಶರಣರ ವಚನಗಳ ರಕ್ಷಣೆ ಮಾಡಿದರು. ಆದರೆ ಬಿಜ್ಜಳನ ಸೈನ್ಯದ ಎದುರು ಆಟ ಸಾಗದಾದಾಗ ವಚನ ಸಾಹಿತ್ಯದ ಗಂಟುಗಳನ್ನು ಬೆನ್ನಿಗೆ ಕಟ್ಟಿಕೊಂಡು ಸುರಕ್ಷಿತ ಸ್ಥಳಕ್ಕೆ ಹೋಗಲು ಎಲ್ಲ ಶರಣ-ಶರಣೆಯರು ಸಿದ್ಧರಾದರು. ಹಾಗೆ ಉಳವಿಯತ್ತ ನಡೆಯುವಲ್ಲಿ ಅಕ್ಕನಾಗಮ್ಮನದೇ ಪ್ರಧಾನ ಪಾತ್ರ. ಉಳವಿಯ ಯಾತ್ರೆಯಲ್ಲಿ ತನ್ನೊಂದಿಗೆ ಆಗಮಿಸಿದ ಶಿವಶರಣ ಬಳಗದ ಯೋಗಕ್ಷೇಮ ನೋಡಿಕೊಂಡು ವಚನ ಸಾಹಿತ್ಯದ ಹಸ್ತಪ್ರತಿಗಳ ಕಟ್ಟುಗಳನ್ನು ಸುರಕ್ಷಿತವಾಗಿ ಸಂರಕ್ಷಿಸಲು, ಮತ್ತು ಅಲ್ಲಲ್ಲಿ ಸತ್ಸಂಗ ಗೋಷ್ಠಿ ವಿಚಾರ ಗೋಷ್ಠಿ ಮುಖಾಂತರ ವಚನಗಳ ಮೌಲ್ಯತೆಯ ಪ್ರಸಾರ ಮಾಡಲಾಯಿತು. ಹೀಗೆ ಹೋರಾಡುತ್ತ ಸಾಗುತ್ತಿದ್ದಾಗ ಕಾರಿಮನೆ ಎಂಬಲ್ಲಿ ಮಡಿವಾಳ ಮಾಚಿದೇವ ಲಿಂಗೈಕ್ಯನಾದರೆ, ಕಾದರೊಳ್ಳಿಯಲ್ಲಿ ಗಂಗಾಂಬಿಕೆ, ಡೋಹರ ಕಕ್ಕಯ್ಯ ಕಕ್ಕೇರಿಯಲ್ಲಿ ಅಡಗಿದರು. ಅಕ್ಕನಾಗಮ್ಮನವರು ಎದೆಗುಂದದೆ, ಮುಗುಟಖಾನ, ಹುಬ್ಬಳ್ಳಿ, ಸವದತ್ತಿ ಧಾರವಾಡ-ಹುಬ್ಬಳ್ಳಿ ಕಡೆಗೆ ಸಾಗಿದರು. ಹುಬ್ಬಳ್ಳಿಯಲ್ಲಿ ನಿರಂಜನ ಪೀಠ ಸ್ಥಾಪಿಸಿ(೩೦೦೦ ಶರಣರೊಂದಿಗೆ) ಗುರು ಸಿದ್ದೇಶ್ವರರನ್ನು ನಿಯೋಜಿಸಿ ಯಲ್ಲಾಪುರ ಮಾರ್ಗವಾಗಿ ದಾಂಡೇಲಿ ತಲುಪಿ ಅಲ್ಲಿಂದ ಕಾಳಿ ನದಿ ದಾಟಿ ಉಳವಿಗೆ ಸೇರಿದರು. ಈ ದೀರ್ಘ ಪ್ರಯಾಣದಲ್ಲಿ ಚೆನ್ನಬಸವಣ್ಣ ನುಲಿಯ ಚಂದಯ್ಯ, ಕಿನ್ನರಿ ಬೊಮ್ಮಯ್ಯ ಪ್ರಮುಖವಾಗಿ ಇದ್ದರು. ಉಳಿವಿಯಲ್ಲಿ ಚೆನ್ನಬಸವಣ್ಣ (೨೪ನೆಯ ವಯಸ್ಸಿನಲ್ಲಿ) ಲಿಂಗೈಕ್ಯರಾದರು. ಇದರಿಂದ ಮಾತ್ರ ಅಕ್ಕನಾಗಮ್ಮ ಅಧೀರರಾದರು. ಅಂತರಾಳವನ್ನೇ ಅಧೀರವನ್ನಾಗಿಸಿತು. ಆದರೂ ಸ್ಥಿತಪ್ರಜ್ಞಳಾದ ಅಕ್ಕನಾಗಮ್ಮ ಧೈರ್ಯಗೆಡದೇ ಕರ್ತವ್ಯಚ್ಯುತಿ ಹೊಂದದೇ ಇದ್ದದ್ದು ಅವರ ಮನದಾಳದ ಮುಂದಿರುವ ಒಂದೇ ಚಿಂತೆ, ಗುರಿ ವಚನಸಾಹಿತ್ಯದ ರಕ್ಷಣೆ, ಕಲ್ಯಾಣ ಕ್ರಾಂತಿಯ ತರುವಾಯ ಚೆನ್ನಬಸವಾದಿ ಶರಣರೊಂದಿಗೆ ಅಕ್ಕನಾಗಮ್ಮನವರ ಸಾರಥ್ಯದಲ್ಲಿ ನಡೆದ ದಾರಿ 'ದಂಡಿನ ದಾರಿ' ಎಂದು ಪ್ರಸಿದ್ಧವಾಗಿದೆ.

ಕೆಲವು ಐತಿಹ್ಯಗಳ ಪ್ರಕಾರ ಮಗನ ಮರಣಾನಂತರ ಸುಮಾರು ಎಪ್ಪತ್ತರ ಅಂಚಿನಲ್ಲಿದ್ದರೂ ಉಳವಿಯಲ್ಲಿರಲು ಬಯಸದೇ, ನುಲಿಯ ಚಂದಯ್ಯ ರುದ್ರಮುನಿ ಮುಂತಾದವರೊಡನೆ, ಧರ್ಮ ಪ್ರಚಾರಕ್ಕೆ ಸಹ್ಯಾದ್ರಿಯ ತಪ್ಪಲಿನ ಕಡೆಗೆ ಪ್ರಯಾಣ ಆರಂಭಿಸಿದರು. ಮರಡಿ ನಾಗಲಾಪುರದಲ್ಲಿ ಕೆಲಕಾಲ ಇದ್ದರು. ನಾಗಲಾಪುರದಲ್ಲಿ ಅಕ್ಕನಾಗಮ್ಮನವರ ವಿಗ್ರಹವಿದೆ. ಗಂಭೀರವಾದ ಮುಖಮಂಡಲ, ಹಣೆಯ ಮೇಲೆ ವಿಭೂತಿ, ಕೈಯಲ್ಲಿ ಜಪಮಾಲೆ, ಕೊರಳಲ್ಲಿ ರುದ್ರಾಕ್ಷಿಮಾಲೆ ಹೊಂದಿದ ಎರಡು ಅಡಿ ವಿಗ್ರಹವಿದೆ. ಪಕ್ಕದಲ್ಲಿ ಬಸವನ ಮೂರ್ತಿ ಇದೆ. ಮುಂದೆ ಬಾಳೆಹೊನ್ನೂರಿನಲ್ಲಿ ಒಂದು ಪೀಠವನ್ನು ಸ್ಥಾಪಿಸಿ ರುದ್ರಮುನಿಗೆ ಪಟ್ಟಗಟ್ಟಿದಳು. ಮುಂದೆ ಶರಣರೊಂದಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಎಣ್ಣೆಹೊಳೆಯ ಸಮೀಪ ಪ್ರಶಾಂತ ಬಯಲಿನಲ್ಲಿ ಆಶ್ರಮ ಸ್ಥಾಪಿಸಿ ಧರ್ಮ ಪ್ರಚಾರ ಮಾಡುತ್ತ ವಯೋಮಾನದಿಂದ ಮಾನಸಿಕ ದೌರ್ಬಲ್ಯದಿಂದ ತಮ್ಮ ಶರೀರವನ್ನು ತ್ಯಜಿಸಿದರು.

ಜಾನಪದ ಸಾಹಿತ್ಯದಲ್ಲಿ ಅಕ್ಕನಾಗಮ್ಮನನ್ನು ಜನಪದರು ನೆನೆದಿದ್ದಾರೆ.

*-ಮುಕ್ಕುಹಾಕುವ ಮೊದಲು ಮುಕ್ಕಣ್ಣನ ನೆನೆದೇನು !*
*ಮುಕ್ಕಾಲು ಭೃಂಗಿ ಗೌರವ್ವ । ಬಸವೇಶ್ವರನ*
*ಅಕ್ಕನಾಗಮ್ಮನ ನೆನೆದೇನು.*

*- ಬಸವನಗ್ರಜೆ ನಾಗಲಾಂಬಿಕೆಯ.*

*-ಅಕ್ಕನಾಗಾಂಬಿಕೆಯರನುಜಂ ತೆಗೆದೆತ್ತಿ*
*ಅಕ್ಕರಿಂದಪ್ಪಿ ಜೈ ಮುಂಡಾಡಿ ಬಸವಯ್ಯ*
*ಚಿಕ್ಕನೆನ್ನಿದಿರೊಳುಂ ಕುಣಿದಾಡು.*

*- ಅಕ್ಕನಾಗಮ್ಮನ ಕಾಲ ಕ್ರಿ.ಶ. ೧೧೬೦.*

ಬಸವಣ್ಣ ಪ್ರಿಯ ಚನ್ನಸಂಗಯ್ಯ, ಬಸವಪ್ರಿಯ ಕೂಡಲ ಸಂಗಯ್ಯ ಎಂಬ ಅಂಕಿತಗಳಲ್ಲಿ ೧೨ ವಚನಗಳು ಶಿವಶರಣೆಯ ವಚನ ಸಂಪುಟಗಳಲ್ಲಿ ಪ್ರಕಟವಾಗಿವೆ. ಬಸವಸ್ತುತಿ, ಶರಣಸ್ತುತಿ, ಆಧ್ಯಾತ್ಮರಂಗದಲ್ಲಿ ಆಕೆ ಸಾಧಿಸಿದ ನಿಲುವು, ಶ್ರದ್ಧೆ, ಸಹೋದರ ಪ್ರೇಮ ವಚನಗಳಲ್ಲಿ ಕಂಡು ಬರುತ್ತವೆ.

*ಆಚಾರವೆಂಬುದು ಅಗೋಚರ ನೋಡಯ್ಯ ಆರಿಗೆಯೂ ಸಾಧ್ಯವಿಲ್ಲ*
*ಮರ್ತ್ಯಲೋಕದಲ್ಲಿ ಆ ಸದಾಚಾರದ ಬೆಳವಿಗೆಯ ಮಾಡಲೆಂದು*
*ಬಸವಣ್ಣ ಬಂದು ಭಕ್ತಿ ಸ್ಥಲವ ಹರಹಿ*
*ಗುರುಲಿಂಗ ಜಂಗಮ ದಾಸೋಹ ಪಾದೋದಕ ಪ್ರಸಾದದ*
*ಹಾದಿಯನೆಲ್ಲರಿಗೆ ತೋರಿದ*
*ಶಿವಾಚಾರದ ಬೆಳವಿಗೆಯ ಘನವ ಅಹುದಲ್ಲವೆಂದು ಬಿಜ್ಜಳ ತರ್ಕಿಸಲು*
*ಅನಂತ ಮುಖದಿಂದ ಒಡಂಬಡಿಸಿ ಅಹುದೆನಿಸಿದ*
*ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ ಬಗಿದು ಹೊಕ್ಕಡೆ*
*ಹಿಂದೆ ಲೋಕವರಿದು ಬದುಕಬೇಕೆಂದು ಸೆರಗು ಕೊಟ್ಟ*





ಬಸವಣ್ಣನವರ ಸಮಗ್ರ ಸಾಧನೆಯ ನೀಲಿ ನಕ್ಷೆ ಮೂಡಿದೆ ಈ ವಚನ. ಈ ವಚನದಲ್ಲಿ ಪದಗಳ ಬಳಕೆ ವಿಶಿಷ್ಟ ಅರ್ಥ ಕೊಡುತ್ತದೆ. ಆಚಾರದ ಹೆಸರಲ್ಲಿ ಮತಾಂಧತೆ ಢಂಬಾಚಾರ, ಶೋಷಣೆ ಇವುಗಳನ್ನು ನಿವಾರಿಸಲು ಸದಾಚಾರ ಬೇಕು ಎಂದರು. ಸದಾಚಾರ ಎಂದರೆ ಆರ್ಥಿಕ ಸಮಾನತೆಯ ಸೂತ್ರ, ಆರ್ಥಿಕ ಶೋಷಣೆಯ ಶತ್ರು, ಸತ್ಯಶುದ್ಧ ಕಾಯಕ, ಅಸಂಗ್ರಹ ದಾಸೋಹಗಳಿಂದ ಕೂಡಿದ, ಸದಾಚಾರವನ್ನು ಬೆಳೆಸುವ ಸಂಕಲ್ಪ ತೊಟ್ಟರು. ಗುರುಕಾರುಣ್ಯ ಲಿಂಗಪೂಜೆ ಜಂಗಮ ಮಾರ್ಗದರ್ಶನ ಸತ್ಯಶುದ್ಧ ದಾಸೋಹ ಪಾದೋದಕ ಪ್ರಸಾದ ಎಲ್ಲರಿಗೂ ಲಭ್ಯವಾಗಬೇಕೆಂಬ ಹಾದಿಯನ್ನು ಹಾಕಿದ. ಶಿವಾಚಾರ ಎಂದರೆ ಸಾಮಾಜಿಕ ಸಮಾನತೆ. ಜಾತಿ ಪದ್ಧತಿ ವಿರುದ್ಧ, ಹೋರಾಟಕ್ಕೆ ಬಸವಣ್ಣ ನಿಂತಾಗ ಬಿಜ್ಜಳನು ತಳಮಳಗೊಂಡು ವಾದಕ್ಕಿಳಿದಾಗ ವರ್ತಿಸಿದರು. ಲೋಕಕ್ಕೆ ತಾವು ಬಂದ ಮಣಿಹ ಪೂರೈಸಿತು ಎಂದು ಲಿಂಗೈಕ್ಯರಾದರು. ಸೆರಗು ಎಂದರೆ ಆಶ್ರಯ. ಅನುಯಾಯಿಗಳು ಮುನ್ನಡೆಯಲು ಸೆರಗು ಕೊಟ್ಟಿದ್ದಾರೆ.

*'ಶ್ರೀಗುರುವೆ ತಾಯಿತಂದೆಯಾಗಿ ಲಿಂಗವೆ ಪತಿಯಾಗಿ*
*ಜಂಗಮವೆ ಅತ್ತೆ ಮಾವಂದಿರಾಗಿ ಶಿವಭಕ್ತರೆ ಬಾಂಧವರಾಗಿ*
*ಸತ್ಯಸದಾಚಾರವೆಂಬ ಮನೆಗೆ ಕಳುಹಿದರಾಗಿ*
*ಶರಣಸತಿ ಎಂಬ ನಾಮ ನಿಜವಾಯಿತ್ತು*
*ಅದೆಂತು ಇರುವೆ ಹಿಂದು ಮುಂದರಿಯದೆ ನಡೆವೆ*
*ಮನಕ್ಕೆ ಮನಸಾಕ್ಷಿಯಾಗಿ ಮಾಡುವೆ*
*ಬಸವಣ್ಣ ಪ್ರಿಯ ಚೆನ್ನಸಂಗಯ್ಯ ನಿಮ್ಮಡಿಗಳಿಗೆ'*

ಲೌಕಿಕ ಸಂಬಂಧಗಳನ್ನು ಕಳಚಿಕೊಂಡು ಆಧ್ಯಾತ್ಮಿಕ ಮಾರ್ಗದಲ್ಲಿ ಅವಳು ಸಾಧಿಸಿದ ಹಿರಿಮೆಯನ್ನು ಈ ವಚನದಲ್ಲಿ ಅರಿಯಲಾಗಿದೆ.

*'ಮನದೊಡೆಯ ಮಹಾದೇವ ಮನವ ನೋಡಿಹನೆಂದು*
*ಮನುಜರ ಕೈಯಿಂದ ಒಂದೊಂದ ನುಡಿಸುವನು*
*ಇದಕ್ಕೆ ಕಳವಳಿಸದಿರು ಮನವೆ ಕಾತರಿಸದಿರು ಮನುವೆ*
*ನಿಜವ ಮರೆಯದಿರಾ ಕಂಡೆ ನಿಶ್ಚಿಂತನಾಗಿರು ಮನವೇ*
*ಬಸವಣ್ಣ ಪ್ರಿಯ ಚನ್ನಸಂಗಯ್ಯನು*
*ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು'*

ಲೌಕಿಕರಿಂದ ಬಂದ ಮಾತುಗಳೆಲ್ಲ ಪರಮಾತ್ಮನೇ ಆಡಿಸಿದಂತವುಗಳು ಅದಕ್ಕಾಗಿ ಚಿಂತಿಸಬೇಕಾಗಿಲ್ಲ. ಅವೆಲ್ಲಕ್ಕೂ ಬೆದರದೆ ಮುನ್ನಡೆದರೆ ಪರಮಾತ್ಮನು ಅದನ್ನು ತೊಡೆದುಹಾಕುವನು ಎನ್ನುವಲ್ಲಿ ಆಕೆಗಿರುವ ಪರಮಾತ್ಮನ ನಿಷ್ಠೆ ವ್ಯಕ್ತವಾಗುವುದು.

ಬಸವಣ್ಣ ಲಿಂಗೈಕ್ಯವಾದ ನಂತರ
..... ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯ
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ
ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ
ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತಲ್ಲ ಬಸವಣ್ಣ
ಎಂದು ಹೇಳುತ್ತಾರೆ.

ಅಕ್ಕನಾಗಮ್ಮ ಆತ್ಮವಿಶ್ವಾಸದ ಪ್ರತೀಕ. ಮಾತೃ ಹೃದಯಿ. ವಚನಗಳ ರಕ್ಷಕಿ. ಶಿವಶರಣೆಯರಲ್ಲಿಯೇ ಅತ್ಯಂತ ಹಿರಿಯರಂತೆ ತೋರುವ ಅಕ್ಕನಾಗಮ್ಮ ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣ ಇವರ ಆಧ್ಯಾತ್ಮಿಕ ಜೀವನಕ್ಕೆ ತೊಟ್ಟಿಲಾಗಿ ಅವರಿಂದ ತಾನೂ ಆಧ್ಯಾತ್ಮದ ಮೆಟ್ಟಿಲನ್ನು ಏರಿದಳು.

ಅಕ್ಕನಾಗಮ್ಮ, ನಾಗಲಾಂಬಿಕೆ, ನಾಗಾಯ, ನಾಗಮ್ಮ ವೀರಮಾತೆ ಎಂದು ಹೆಸರಾದ ಈ ಮಹಾಮಾತೆ ಜನರ ಸ್ಮರಣೆಯಿಂದ ದೂರವಾಗಿರುವುದು ವಿಷಾದನೀಯ. ಈ ತಾಯಿಯ ದಿವ್ಯ ವ್ಯಕ್ತಿತ್ವಕ್ಕೆ ಶರಣಾರ್ಥಿಗಳು. ❁

## ಬಸವಣ್ಣನವರ ವಚನಗಳ ಕಂಠಪಾಠ ಸ್ಪರ್ಧೆ

**ವಿಜೇತರರಿಗೆ ಹತ್ತುಸಾವಿರ ರೂಪಾಯಿ ನಗದು ಬಹುಮಾನ**

ಧರ್ಮಗುರು ಬಸವಣ್ಣನವರ ವಚನಗಳು ವ್ಯಾಪಕವಾಗಿ ಜನಮನಗಳಿಗೆ ತಲುಪಿಸುವ ನಿಟ್ಟಿನಲ್ಲಿ ಮತ್ತು ಪರಿಚಯಕ್ಕಾಗಿ **ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು, ಹಿರೇಮಠ** ಸಂಸ್ಥಾನ, ಭಾಲ್ಕಿ ವತಿಯಿಂದ 2008ನೆಯ ಸಾಲಿನ ಧರ್ಮಗುರು 'ಬಸವಣ್ಣನವರ ವಚನಗಳ ಕಂಠಪಾಠ ಸ್ಪರ್ಧೆ' ಏರ್ಪಡಿಸಲಾಗಿದೆ. ದಿನಾಂಕ **21-12-2008**ರಂದು ಈ ಸ್ಪರ್ಧೆ ನಡೆಸಲಾಗುತ್ತದೆ. ಈ ಸ್ಪರ್ಧೆ ರಾಜ್ಯಮಟ್ಟದಲ್ಲಿ ನಡೆಸಲಾಗುತ್ತಿರುವುದರಿಂದ ಎಲ್ಲಾ ಜಿಲ್ಲೆಗಳಿಂದ ಸ್ಪರ್ಧಾಳುಗಳು ಭಾಗವಹಿಸಬಹುದಾಗಿದೆ. ಹೆಚ್ಚು ವಚನಗಳು ಕಂಠಪಾಠವಾಗಿ ಹೇಳಿ ವಿಜೇತರಾದವರಿಗೆ ರೂ. **10,000/-** (ಹತ್ತು ಸಾವಿರ ರೂಪಾಯಿಗಳು ಮಾತ್ರ) ನಗದು ಬಹುಮಾನ ಮತ್ತು ಪ್ರಶಸ್ತಿ ಪತ್ರ ನೀಡಿ ಗೌರವಿಸಲಾಗುವುದು.

ಸ್ಪರ್ಧೆಯಲ್ಲಿ ಭಾಗವಹಿಸುವ ಸ್ಪರ್ಧಾಳುಗಳು ದಿನಾಂಕ **01-12-2008**ರಂದು ಅಥವಾ ಒಳಗಾಗಿ ತಮ್ಮ ಹೆಸರುಗಳನ್ನು ಹಿರೇಮಠ ಸಂಸ್ಥಾನ, ಭಾಲ್ಕಿ ಕಾರ್ಯಾಲಯದಲ್ಲಿ ನೋಂದಾಯಿಸಬೇಕು. ಎಲ್ಲರಿಗೂ ಉಚಿತ ಪ್ರವೇಶ ಉಂಟು. ದೂರದಿಂದ ಆಗಮಿಸುವ ಸ್ಪರ್ಧಾಳುಗಳು ತಮ್ಮ ಹೋಗಿ ಬರುವ ಖರ್ಚನ್ನು ತಾವೇ ಭರಿಸಬೇಕು. ವಸತಿ ಮತ್ತು ಪ್ರಸಾದ ವ್ಯವಸ್ಥೆ ಉಚಿತವಾಗಿ ಒದಗಿಸಲಾಗುವುದು. ಸ್ಪರ್ಧೆಯಲ್ಲಿ ಭಾಗವಹಿಸುವವರು ಬಸವಣ್ಣನವರ ವಚನಗಳನ್ನು ಮಾತ್ರ ಹೇಳಬೇಕು. ವಚನಪೂರ್ತಿಯಾಗಿ ಹೇಳಬೇಕು. ವಚನ ನೆನಪಿಸಿಕೊಳ್ಳಲು ಮಧ್ಯದಲ್ಲಿ 30 ಸೆಕೆಂಡು ಕಾಲಾವಕಾಶ ಮಾತ್ರ ಇರುತ್ತದೆ. ಹೆಚ್ಚಿನ ವಿವರಗಳಿಗಾಗಿ **ಕಾರ್ಯದರ್ಶಿ, ಹಿರೇಮಠ ಸಂಸ್ಥಾನ ಭಾಲ್ಕಿ, ಬೀದರ ಜಿಲ್ಲೆ. ದೂರವಾಣಿ ಸಂಖ್ಯೆ 08484-262254ಕ್ಕೆ ಸಂಪರ್ಕಿಸಬಹುದಾಗಿದೆ.**

## ವಚನಗಳಲ್ಲಿ ವೈಜ್ಞಾನಿಕ ಅಂಶಗಳು

### ತೆರಣಿ ಹುಳದ ಜೀವನ ಕ್ರಮ

ತೆರಣಿ ಹುಳದ ಜೀವನ ಕ್ರಮ ನಿರ್ದಿಷ್ಟ ಗುರಿಯಿಲ್ಲದ ದುರಾಶೆಯು ದುರಂತಕ್ಕೆ ಕಾರಣವೆಂಬುದಕ್ಕೆ ಉದಾಹರಣೆ.

ಅಕ್ಕಮಹಾದೇವಿಯವರ ಇನ್ನೊಂದು ವಚನವು ಇಂತಿದೆ.

*ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ,*
*ತನ್ನ ನೂಲು ತನ್ನನೇ ಸುತ್ತಿ ಸಾವಂತೆ,*
*ಮನಬಂದುದ ಬಯಸಿ ಬೇವುತ್ತಿದ್ದೆನಯ್ಯಾ*
*ಎನ್ನಮನದ ದುರಾಸೆಯ ಮಾಣಿಸಿ,*
*ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನಾ'.*

ಅಕ್ಕಮಹಾದೇವಿಯವರು ತೆರಣಿ(ರೇಶ್ಮೆ)ಯ ಹುಳದ ಜೀವನಕ್ರಮ ಮತ್ತು ಅದರ ದುರಂತ ಸಾವನ್ನು ಪ್ರಸ್ತುತ ವಚನದಲ್ಲಿ ವರ್ಣಿಸಿದ್ದಾರೆ. ತನ್ನಿಂದ ಪ್ರವಹಿಸಿದ ದ್ರವದ ಎಳೆಯನ್ನು, ನಿರ್ದಿಷ್ಟ ಗುರಿಯಿಲ್ಲದೇ, ಸುತ್ತುತ್ತ ಸಾಗುತ್ತ ತನ್ನನ್ನು ತಾನೇ ಸುತ್ತಿಕೊಂಡು ತನ್ನ ಪ್ರಾಣವನ್ನೇ ಕಳೆದುಕೊಳ್ಳುವುದು ಅದರ ವಾಸ್ತವಿಕ ಜೀವನ ಕ್ರಮ. ಇದು ಪ್ರಾಣಿಶಾಸ್ತ್ರದ ಪಠ್ಯಗಳಲ್ಲಿ ವಿದ್ಯಾರ್ಥಿಗಳು ಅಭ್ಯಸಿಸುವ ವಿಷಯ. ನಿರ್ದಿಷ್ಟ ಗುರಿ ಇಲ್ಲದುದು ಹಾಗೂ ದುರಾಸೆಯು ಅಲ್ಲದೆ ಮನಬಂದಂತೆ ವರ್ತಿಸುವುದು ಹೇಗೆ ದುರಂತದಲ್ಲಿ ತನ್ನನ್ನೇ ಕೊನೆಗೊಳಿಸುವುದು ಎಂಬುದನ್ನು ಬಿಂಬಿಸಲು ಅಕ್ಕನವರು ಪ್ರಾಣಿಶಾಸ್ತ್ರದಲ್ಲಿ ಈಗ ನಾವು ಕಲಿಯುವ ಪಾಠವೊಂದನ್ನು ಉದಾಹರಣೆಯಾಗಿ ತೆಗೆದುಕೊಂಡಿದ್ದಾರೆ. ಮುಂದುವರೆದು, ಇಂಥ ದುರಾಶೆಯಿಂದ ತನ್ನನ್ನು ದೂರವಿರಿಸು ಎಂದು ದೇವರಲ್ಲಿ ಪ್ರಾರ್ಥಿಸಿಕೊಂಡಿದ್ದಾಳೆ.

ಇಲ್ಲಿ ಸಾಮಾಜಿಕ ನೀತಿಯನ್ನು ನಿರ್ಧರಿಸುವಾಗ ಹೇಗೆ ನಾವು ನಿಸರ್ಗದಲ್ಲಿ ವೈಜ್ಞಾನಿಕ ಘಟನೆಗಳಿಂದ ಪಾಠ ಕಲಿಯಬಹುದೆಂದು ತಿಳಿಸಿದ್ದಾರೆ. ಧರ್ಮದೊಡನೆ ವಿಜ್ಞಾನದ ಸಂಯೋಜನೆಯನ್ನು ನಾವು ಇಲ್ಲಿ ಕಾಣುತ್ತೇವೆ.

–ಮುಂದುವರೆಯುತ್ತದೆ.

–ಡಾ|| ವ್ಹಿ.ವ್ಹಿ. ಬಾಗಲಕೋಟಿ,
ವಿಶ್ವಚೇತನ ಪ್ರಕಾಶನ,
ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ–
೫೯೧೩೦೭.

## ಬಸವಣ್ಣ ಘನಮಹಿಮಾ ಪುರುಷ

ಬಸವನ ನಡೆ ಪರುಷ, ನುಡಿ ಪರುಷ, ದೃಷ್ಟಿ ಪರುಷ
ಹಸ್ತಿ ಪರುಷ, ಮನ ಪರುಷ, ತನು, ಮನ, ಧನವು
ಗುರುಲಿಂಗ ಜಂಗಮಕ್ಕೆ ನಿವೇದಿಸುವಾತ ಬಸವಣ್ಣನು
ಬಸವಣ್ಣನ ನೆನೆಯುವುದೇ ಲಿಂಗಾರ್ಚನೆ ಎನಗೆ
ಬಸವಣ್ಣನ ನೆನೆಯುವುದೇ ಪರತತ್ವ ಪರಮಕಲ್ಯಾಣವೆನಗೆ
ಕಲಿದೇವಯ್ಯಾ ನಿಮ್ಮ ಶರಣಬಸವಣ್ಣನು ಇಂತಹ
ಘನಮಹಿಮ ನೋಡಯ್ಯಾ

–ಮಡಿವಾಳ ಮಾಚಿದೇವ

ಕಲ್ಯಾಣಕ್ರಾಂತಿಯ ಷಟ್ ಪ್ರಮುಖರಲ್ಲಿ ವೀರಗಂಟೆಯ ಮಡಿವಾಳ ಮಾಚಯ್ಯನು ಒಬ್ಬ. ಭಕ್ತಿಗೆ ಬಸವಣ್ಣ ಅಗ್ರಗಣ್ಯನಾದರೆ, ಮಹೇಶಸ್ಥಲಕ್ಕೆ ಮಡಿವಾಳ ಮಾಚಯ್ಯ, ಪ್ರಸಾದಿ ಸ್ಥಲಕ್ಕೆ ಚೆನ್ನಬಸವಣ್ಣ, ಪ್ರಾಣಲಿಂಗಿ ಸ್ಥಳಕ್ಕೆ ಸಿದ್ಧರಾಮೇಶ್ವರ, ಶರಣಸ್ಥಲಕ್ಕೆ ಮಹಾದೇವಿ ಅಕ್ಕ, ಐಕ್ಯ ಸ್ಥಲಕ್ಕೆ ಅಲ್ಲಮಪ್ರಭು ಅಗ್ರಗಣ್ಯರಾಗಿದ್ದಾರೆ. ಬಸವ ಬೋಧೆಯು ಬೆಳೆದು ವಸುಧೆಯಲ್ಲಿ ಹಬ್ಬುತ್ತಲೇ ಹೊಸಮತಕ್ಕೆ ಮೊದಲು ಆಕರ್ಷಿತನಾದವನು ಮಡಿವಾಳ ಮಾಚಯ್ಯನವರು. ಇವರು ಬರೆದ 253 ವಚನಗಳಲ್ಲಿ ಅರ್ಧದಷ್ಟು ವಚನಗಳು ಬಸವಣ್ಣನವರ ಕೀರ್ತಿ, ಸ್ತುತಿಗೆ ಮೀಸಲಾಗಿರುವನೆಂದರೆ ಆತನ ಕಡು ನಿಷ್ಠೆಯ ಬಸವ ಭಕ್ತಿಯ ಅರಿವಾಗುತ್ತದೆ. ಬಾಹ್ಯಾಚರಣೆಗಳಿಗಿಂತ ಅಂತರಂಗಶುದ್ಧಿಗೆ ಬಹಳ ಮಹತ್ವ ನೀಡುತ್ತಿದ್ದನು. ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ವಚನ ಸಾಹಿತ್ಯವನ್ನು ಸುರಕ್ಷಿತವಾಗಿ ಈಗಿನ ಕಾರವಾರ ಜಿಲ್ಲೆಯ ಉಳುವಿಯನ್ನು ತಲುಪಿಸಿದ ಶ್ರೇಯಸ್ಸು ಮಡಿವಾಳ ಮಾಚಯ್ಯನವರಿಗೆ ಸಲ್ಲುತ್ತದೆ.

ಬಸವನ ನಡೆ ಶುದ್ಧ, ಬಸವನ ನುಡಿ ಶುದ್ಧ, ಹಸ್ತ ಶುದ್ಧ, ಮನಸ್ಸು ಶುದ್ಧ, ತನುವನ್ನು ಗುರುವಿನ ಸೇವೆಗಾಗಿ, ಮನವನ್ನು ಲಿಂಗಪೂಜೆಗಾಗಿ ಧನವನ್ನು ಜಂಗಮ ದಾಸೋಹಕ್ಕಾಗಿ ನಿತ್ಯದಲ್ಲಿ ನೈವೇದ್ಯ ಮಾಡುವವನಾಗಿದ್ದಾನೆ. ಬಸವಣ್ಣನವರನ್ನು ನೆನೆಯುವುದು ಲಿಂಗಪೂಜೆ, ಬಸವಣ್ಣನವರನ್ನು ನೆನೆಯುವುದೇ ಪರತತ್ವ, ಬಸವಣ್ಣನವರನ್ನು ನೆನೆಯುವುದೇ ಪರಮ ಕಲ್ಯಾಣ ಎನಗೆ ಎಂದು ಮಡಿವಾಳ ಮಾಚಯ್ಯ ಶರಣರು ವಿವರಿಸುತ್ತಾರೆ. ಬಸವಣ್ಣನಂತಹ ಘನಮಹಿಮೆ ಯಾರಿದ್ದಾರೆ.

–ಲಿಂಗಬಸಪ್ಪ ವೀರಸಂಗಪ್ಪ ಅಂಗಡಿ, ಗಣೇಶಕಟ್ಟಿ,
ರಾಯಚೂರ–584 101.





## ಕಷ್ಟ ಸಾಧ್ಯ ಲಿಂಗಾಂಗ ಸಮರಸ

–ಶಿ.ಬಿ. ಪುಣೇದ, ನಂ. ೪೮, ಮಹಾಂತೇಶನಗರ, ಬೆಳಗಾವಿ–೫೯೦ ೦೧೬.

*'ಸಕಲೇಂದ್ರಿಗಳಲಿ ವಿಕರಿಸುವ ಮನವ*
*ಸೆಳೆದು ನಿಂದಾತನೆ ಸುಖಿಯು*
*ಪಂಚೇಂದ್ರಿಯಗಳಿಚ್ಛೆಯಲಿ ಕೀಳು ಮನಂಗೊಂಡು*
*ಸುಳಿವಾತನೆ ದುಃಖಿ*
*ಮನವು ಬಹಿರ್ಮುಖಿವಾಗಲು ಮಾಯಾಪ್ರಪಂಚ*
*ಮನವು ಅಂತರ್ಮುಖವಾದಡೆ ಅವಿರಳ ಜ್ಞಾನಿ*
*ಮನವು ಮಹದಲ್ಲಿ ನಿಂದಿರಲಾತನು ಮುಕ್ತನು*
*ಮನೋಲಯವಾದಡೆ*
*ಸ್ವರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು'*

–ಆದಯ್ಯಗಳು

ಮಾನವನ ಎಲ್ಲ ವ್ಯವಹಾರಗಳಲ್ಲಿ ಮನವು ನಿಯಂತ್ರಿಸುವುದು, ವ್ಯವಹಾರಗಳಲ್ಲಿ ಲಾಭ–ಹಾನಿ, ಆಯವ್ಯಯ ಸುಖ–ದುಃಖಾದಿಗಳು ಇರುವುದು ಸಹಜ, ಸ್ವಾಭಾವಿಕ. ಅದಕ್ಕಾಗಿ ದಾರ್ಶನಿಕರು 'ಮನವೇ ಕಾರಣ ಭವ–ಬಂಧನ ಹಾಗೂ ಮೋಕ್ಷಕ್ಕೆ' ಎಂದು ಉಸಿರಿದ್ದು. ಪ್ರಸ್ತುತ ವಚನದಲ್ಲಿ ಆದಯ್ಯ ಶರಣರು ಮನದ ಹತೋಟಿಯ ಮಹತಿಯನ್ನು ಬಿಂಬಿಸುತ್ತ ಆತ್ಮಾವಲೋಕನದ ದಾರಿ ತೋರಿಸುತ್ತಿದ್ದಾರೆ.

ಆದಯ್ಯಗಳು ಬಸವಾದಿ ಶಿವಶರಣರು ಬಳವಳಿ ವಿಡಿದು ಕಲ್ಯಾಣ ಕ್ರಾಂತಿಯ ನಂತರದ ದಶಕಗಳಲ್ಲಿ ಪುಲಿಗೇರಿ ಈಗಿನ ಲಕ್ಷ್ಮೇಶ್ವರ(ಗದಗ) ದಲ್ಲಿ ನೆಲೆ ಮುಂದುವರೆಸಿದರು. ಮೊದಲು ಕಟ್ಟಾ ಶೈವರಾಗಿದ್ದ ಇವರು ಬಸವಾದಿ ಶಿವಶರಣರ ಪ್ರಭಾವಕ್ಕಾಗಿ ಲಿಂಗವಂತ ಧರ್ಮ ಸ್ವೀಕರಿಸಿದವರೆಂದು ವ್ಯಕ್ತವಾಗುತ್ತದೆ. ಇವರು ಬರೆದ ವಚನಗಳು ಈಗ ಲಭ್ಯವಿದ್ದಂತೆ 403, ವಚನಾಂಕಿತ 'ಸೌರಾಷ್ಟ್ರ ಸೋಮೇಶ್ವರ'.

ಖಾಟೀವಾಡ(ಸೌರಾಷ್ಟ್ರ) ಈಗಿನ ಗುಜರಾತ್ ಪ್ರಾಂತ್ಯದ ಸೀಮೆ. ಮೊದಲು ಹಳೆಯ ಮುಂಬಯಿ ಪ್ರಾಂತದ ಉತ್ತರದ ಪ್ರಮುಖ ಕೇಂದ್ರವಾಗಿತ್ತು. ಇಲ್ಲಿಯ ಜನರು ಬಹುತೇಕ ವ್ಯಾಪಾರಿ ಪ್ರವೃತ್ತಿಯವರು. ಹೀಗಾಗಿ ಬಹಳಷ್ಟು ಗುಜರಾತಿಗಳು ಜಗದ ಎಲ್ಲೆಡೆಯಂತೆ ದಕ್ಷಿಣ ಭಾಗದಲ್ಲಿ ನೆಲೆಯೂರಿದ್ದಾರೆ. ಮೇಲಿನ ವಚನಕಾರರಾದ ಆದಯ್ಯ ತಂದೆಗಳು ಸೌರಾಷ್ಟ್ರದಿಂದ ಲಕ್ಷೇಶ್ವರಕ್ಕೆ ಬಂದು ನೆಲೆ ಕಂಡವರು. ಕಟ್ಟಾಶಿವಭಕ್ತರು ಸೌರಾಷ್ಟ್ರ ಸೋಮೇಶ್ವರ ಇವರ ಆರಾಧ್ಯ ದೇವತೆ. ಯೌವ್ವನದಲ್ಲಿ ಜೈನ ಕನ್ನೆ ಪದ್ಮಾವತಿ ಎಂಬುವಳನ್ನು ಪ್ರೀತಿಸಿ ಮದುವೆಯಾದರು. ಜೈನ–ಲಿಂಗಾಯತ ಧರ್ಮಾ ಚರಣೆಗಳಲ್ಲಿ ಬಹಳಷ್ಟು ಸಾಮ್ಯಗಳಿದ್ದರೂ ಅಂದು ಆಗಾಗ ಇವರ ಮಧ್ಯೆ ತಿಕ್ಕಾಟಗಳು ಇದ್ದೇ ಇದ್ದವು. ಮಾವ ಜಂಗಮರಿಗೆ ಎಸಗಿದ ಅವಮಾನ ಕಾರಣ, ವಾದ ತಲೆ ಎತ್ತಿತು. ಅದು ವಿಕೋಪಕ್ಕೆ ಹೋಗಿ ಸೌರಾಷ್ಟ್ರ ಸೋಮೇಶ್ವರ ಲಿಂಗ ಪುಲಗೇರಿಯ ಸುರಹೊನ್ನೆ ಬಸದಿ ಯಲ್ಲಿ ಸ್ಥಾಪಿಸುವ ಪಣದಲ್ಲಿ ಪರ್ಯಾವಸಾನವಾದದ್ದು ಅಲ್ಲಿ ಆ ರೀತಿ ಸೋಮೇಶ್ವರ ಲಿಂಗ ಸ್ಥಾಪಿಸಿದ್ದು ಇಂದು ಇತಿಹಾಸ.

ಮುಖಾರವಿಂದ ಪಂಚಜ್ಞಾನೇಂದ್ರಿಯಗಳ ಸಮುಚ್ಚಯವಾಗಿದೆ. ಕಣ್ಣು, ಕಿವಿ, ಮೂಗು, ನಾಲಗೆ, ತ್ವಚೆ ಒತ್ತಟ್ಟಿಗೆ ಇದ್ದುದಕ್ಕಾಗಿ ನೋಡುವ, ಕೇಳುವ, ಮೂಸಿಸುವ, ಸ್ವಾಧಿಸುವ, ಸ್ಪರ್ಷಜ್ಞಾನ ಪಡೆಯುವ ಕ್ರಿಯೆಗಳು ಒಟ್ಟಿಗೆ ನಡೆಯುವ ತಾಣವಾಗಿದೆ. ಅದಕ್ಕಾಗಿ 'face is the Index of Mind' ಮುಖವು ಮನಸ್ಸಿನ ತಪಶೀಲು, ಪರಿವಿಡಿ ಎನಿಸಿದೆ. ಮುಖಾರವಿಂದಕ್ಕೆ ಹೊಂದಿ ನಿಂತ ರುಂಡವು ಆಜ್ಞೆ, ವಿಶುದ್ಧಿ, ಸಹಸ್ರಾರು ಹಾಗೂ ಪಶ್ಚಿಮ ಚಿತ್ರಗಳ ಸ್ಥಾನವಾಗಿದೆ. ಹೀಗಾಗಿ ಶರೀರವು ದೇಹದ ಹೊನ್ನ ಕಳಶವೆನಿಸಿದೆ. ರುಂಡವಿಲ್ಲದ ದೇಹಕ್ಕೆ ಮುಂಡಕ್ಕೆ ಏನೂ ಬೆಲೆಯಿಲ್ಲ, ಅನಾಮದೇಹ! ಶಿವ ಹೋದ ಶವದಂತೆ!!

ಈ ಪಂಚೇಂದ್ರಿಯಗಳ ಸರದಾರ, ನೇತಾರ, ಸೂತ್ರದಾರ, ನಿಯಂತ್ರಕ ಮನವೆಂಬ ಕರಣೇಂದ್ರಿಯ. ಅಂತಃಕರಣ ಚತುಷ್ಟಗಳಲ್ಲಿ ಇದು ಒಂದು. ಬುದ್ಧಿ, ಚಿತ್ತ, ಅಹಂಕಾರ ಇನ್ನುಳಿದವುಗಳು. ಅವೂ ಕೂಡ ಮನದ ಆವಾಂತರಗಳೇ ಸಂಕಲ್ಪ ವಿಕಲ್ಪಗಳು ಮನದ ಕಾರಬಾರು. ಚಂಚಲ ಸ್ವಭಾವದಿಂದಾಗಿ ಮಾನವರನ್ನು ಕಷ್ಟಕ್ಕೀಡು ಮಾಡುವುದು. ಕೀಳು ತರದ ವಿಚಾರಗಳನ್ನು ಹುಟ್ಟುಹಾಕಿ

ಜನರನ್ನು ಫಜೀತಿ ಮಾಡುವುದು ಇದರ ಸ್ವಭಾವ. ತಾನು ಮಾತ್ರ ಊರ ಸುಟ್ಟರೂ ಹನುಮಂತ ಹೊರಗೆ ಅನ್ನುವ ಹಾಗೆ ನಿರ್ಲಿಪ್ತನಾಗಿ ಮಜಾ ಮಾಡುವ ಗುಣಸಂಪನ್ನ.

ಇದರಿಂದಾಗಿ ವಿಷಯ ಸುಖಗಳ ಬೆನ್ನು ಹಚ್ಚಿಸಿ ಮಾನವರನ್ನು ಬಹಿರ್ಮುಖಿಗಳನ್ನಾಗಿ ಮಾಡುವುದು. ಇದಕ್ಕೇನೆ ದಾರ್ಶನಿಕರು ಹೇಳುವುದು ಮಾಯಾಪ್ರಪಂಚ ವೆಂದು. ವಿಷಯ ಸುಖದ ವ್ಯಾಮೋಹ ಹೆಚ್ಚಿದಂತೆ ಮಾಯಾ ಪ್ರಪಂಚ ವಿಸ್ತಾರವಾಗುತ್ತ ಹೋಗುತ್ತದೆ. ಇದರ ವ್ಯತಿರಿಕ್ತವಾಗಿ ಇದೆ ಮನ ಅಂತರ್ಮುಖಿಯಾದಾಗ ಧ್ಯಾನಾಸಕ್ತನನ್ನಾಗಿಸಿ, ಅಧ್ಯಾತ್ಮದತ್ತ ಹೆಜ್ಜೆ ಹಾಕಿಸುವುದು. ಅಧ್ಯಾತ್ಮವೆಂದರೆ ಮತ್ತೇನೂ ಅಲ್ಲ. ಜೀವ-ಜಗತ್ತು-ಪರಮಾತ್ಮರುಗಳ ಅವಿನಾಭಾವ ಸಂಬಂಧ ಕುರಿತು ಚಿಂತನೆ. ಮಹದ ಜ್ಞಾನದತ್ತ ಒಲವು. ಇದು ಗಾಢವಾದರೆ ಅವಿರಳ ಜ್ಞಾನಿ.

ಪರಮಾತ್ಮನ ಸ್ವರೂಪ ಸತ್-ಚಿತ್-ಆನಂದ-ನಿತ್ಯ-ಪರಿಪೂರ್ಣ. ಇವೆಲ್ಲ ಲಕ್ಷಣಗಳು ಸೂಕ್ಷ್ಮವಾಗಿ ಪಿಂಡಾಂಡ ನೆನಿಸಿದ ಮಾನವನಲ್ಲಿವೆ. ಸತ್ ಅಂದರೆ ಇರುವಿಕೆ, ಜೀವಂತಿಕೆಯೇ ಅವನ ಇರಿವು. ಚಿತ್ ಅಂದರೆ ಜ್ಞಾನ, ತಿಳಿವಳಿಕೆ ಬುದ್ಧಿಮಾತ್ರ ಮಾನವನಿಗೆ ಪ್ರಾಪ್ತವಾದ ಶ್ರೇಷ್ಠ ವರದಾನ. ಆನಂದವೆಂದರೆ ಸುಖದಲ್ಲಿ ಪರಿಣಮಿಸುವುದು. ನಿತ್ಯ ಅಂದರೆ ಯಾವಾಗಲೂ, ಸದಾಕಾಲ ವ್ಯಕ್ತವಾಗು ವಂಥದ್ದು. ಇದು ಮಾನವನಲ್ಲಿರದಿದ್ದರೆ ಅವನೆಂತು ಜಾಗೃತ ವಿರುವುದು? ಪರಿಪೂರ್ಣವೆಂದರೆ ಎಲ್ಲವನ್ನೂ ಒಳಕೊಂಡದ್ದು. ಮಾನವನ ರೋಮ ರೋಮದಲ್ಲಿಇದು ವ್ಯಕ್ತ. ಹೀಗೆ ಇವೆಲ್ಲ ಗುಣಗಳಿಂದಾಗಿ ಮಾನವ ಪರಮಾತ್ಮನ ಪ್ರತಿಕೃತಿ, ಮಾಡೆಲ್ ಎನಿಸಿ 'ಅಂಗ' ಪದವಾಚಕನಾಗಿದ್ದಾನೆ. ಬ್ರಹ್ಮಾಂಡದಂತೆ ಪಿಂಡಾಂಡ.

'ಲಿಂಗ'ವೆಂಬುದು ಪರಮಾತ್ಮನಿಗೆ ಲಿಂಗವಂತ ಧರ್ಮಿಯರು ಕೊಟ್ಟ ಹೆಸರು. ಪರಮಾತ್ಮ-'ಲಿಂಗ' ಜೀವಾತ್ಮ- 'ಅಂಗ' ಅಂಗ-ಲಿಂಗಗಳ ಸಂಯೋಗವೆ ಲಿಂಗಾಂಗ ಸಮರಸ.

ಸಮಾನ ಗುಣದವರು ಸಮಾನ ವಸ್ತುಗಳು ಬೆರೆಯುವುದು ಸ್ವಾಭಾವಿಕ, ಸುಲಭ. 'ಲಿಂಗ' 'ಅಂಗ'ಗಳು ಸಮಾನವಾದವುಗಳು. ಜೀವಾತ್ಮ ಪರಮಾತ್ಮಗಳು ಪದಗಳೇ ಸೂಚಿಸುವಂತೆ ಏಕಸ್ವರೂಪಗಳು. ಜೀವದಲ್ಲಿ ಇರುವುದೇ ಜೀವಾತ್ಮ. ಪರದಲ್ಲಿ ಇರುವುದೇ ಪರಮಾತ್ಮ. ಅವುಗಳ ಸಮರಸ, ಒಂದು ಗೂಡುವಿಕೆ ಸ್ವಾಭಾವಿಕವೂ ಹೌದು. ಶ್ರಮಪ್ರಾಪ್ತವೂ ಹೌದು, ಕ್ರಮಬದ್ಧವೂ ಹೌದು. ಅದಕ್ಕೆ ತಾಲೀಮು, ಸಾಧನೆ ಬೇಕು. ಇದರ ರಂಗ ಸಜ್ಜುಗೊಳಿಸಲು ಸತ್ಸಂಗ ತರಬೇತು ನೀಡುತ್ತದೆ. ಸತ್ ಶ್ರವಣ ಸಜ್ಜನರೊಡನಾಟ ಮಾನವರನ್ನು ಆಚಾರವಂತನನ್ನಾಗಿಸುತ್ತದೆ. ಅದಕ್ಕಾಗಿಯೇ ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂದರು ಬಸವಣ್ಣ ನವರು. 'ಮಣ್ಣು ಬಿಟ್ಟು ಮಡಿಕೆಯಿಲ್ಲ, ತನ್ನ ಬಿಟ್ಟು ದೇವರಿಲ್ಲ' ಎಂದು ಜಾಣ್ನುಡಿ ಸಾರುತ್ತದೆ. ಆಲಿಸುವ, ಚಿಂತಿಸುವ, ಸಾಧಿಸುವ ವ್ಯವದಾನ ಬೇಕಷ್ಟೆ! ಲಿಂಗವಂತ ಧರ್ಮದ ಅರಿವು, ಆಚಾರ, ಅನುಭಾವ ಪ್ರಕ್ರಿಯೆಗಳು ಇವಕ್ಕೆ ಸಮಾನವಾದವುಗಳು.

ಇನ್ನು ಸಮರಸ ಕಷ್ಟಸಾಧ್ಯ ಹೇಗೆ? ಮನವೇ ಕಾರಣ ಎಲ್ಲ ಸುಖ ದುಃಖಗಳಿಗೆ, ಪುಣ್ಯಪಾಪಕ್ಕೆ ಬಂಧ-ಮೋಕ್ಷಕ್ಕೆ ಎಂಬುದರ ಅನುಭವ ಜನ್ಯವಾದುದು. ಮಂಗಮಾಯದ ಮನ ಚಂಚಲಸ್ವಭಾವದ್ದು. ಅದನ್ನು ಹತೋಟಿಯಲ್ಲಿಡುವುದೇ ಒಂದು ಹರಸಾಹಸ. ಮನದ ಹತೋಟಿ ಸಾಧಿಸುವ ಏಕೈಕ ದೃಷ್ಟಿಯಿಂದ, ಮನದ ಮುಂದಣ ಆಶೆಯಾದ ಮಾಯೆಯನ್ನು ಗೆಲುವ ಉದ್ದೇಶದಿಂದಲೂ ಪರಮಾತ್ಮನ ಕುರುಹುವೆನಿಸಿದ 'ಇಷ್ಟಲಿಂಗ' ಪೂಜೆಯ ಪ್ರಕ್ರಿಯೆಯನ್ನು ಲಿಂಗಾಯತನ ಧರ್ಮ ಪುಷ್ಟೀಕರಿಸಿದೆ. ಕರದಲ್ಲಿರಿಸಿ ಪೂಜಿಸುವ ಭಕ್ತಿಯ ವಿಧಾನದಲ್ಲಿ ದೇಹಭಾವ ತೊಲಗಿಸಲು ಸಹಾಯವಾಗುತ್ತದೆ. ಇಲ್ಲಿ ಕಾರ್ಮಿಕ ಮಲ ತೊಡೆದು ಹಾಕುವ ಉದ್ದೇಶವಿದೆ. ಅದೇ ನಿಷ್ಠೆಯ ಭಕ್ತಿಯನ್ನು ಮುಂದುವರೆಸಿ ತದೇಕ ಚಿತ್ತದಿಂದ ಮನದಲ್ಲಿ ಧ್ಯಾನಿಸುವ ವಿಧಾನದಲ್ಲಿ ಮಾಯಾಮಲದ ನಿವಾರಣೆಯಾಗುತ್ತದೆ. ಅಲ್ಲಿ ಜೀವ-ಭಾವದ ಅಂಜಿಕೆಗಳು ತೊಲಗುವುವು. ಅವಧಾನ, ಆನಂದ ಭಕ್ತಿಗಳ ಮುಂದುವರಿಕೆಯಿಂದ ತಾನು ಪರಮಾತ್ಮನ ಚೇತನ ಸ್ವರೂಪದ ಅರಿವು ತಲೆದೋರುವುದು. ತಾನು ಕಿಂಚಿಜ್ಞನಲ್ಲವೆಂಬ ಭಾವ ಮರೆದು ಅಣುವ ಮಲದ ನಾಶವಾಗುವುದು. ಹೀಗೆ ತನುತ್ರಯಗಳ ಮಲತ್ರಯಗಳನ್ನು ತೊಲಗಿಸಿ 'ದೇಹವೇ ದೇಗುಲ, ಶಿರವೆ ಹೊನ್ನಕಲಶ' ಎಂಬ ಭಾವದಲ್ಲಿ ಹೃದಯಸ್ಥನಾದ ಸ್ಥಿತಿಯಿಂದ ಪರಶಿವನಲ್ಲಿ ತಲ್ಲೀನನಾಗುವುದೇ ಲಿಂಗ-ಅಂಗಗಳ ಸಮರಸವೆನಿಸಿದೆ. ಆಗ ಮನವು ಮಹದಲ್ಲಿ ನಿಂತು ಸೌರಾಷ್ಟ್ರ ಸೋಮೇಶ್ವರವೆಂಬ ಮಹಾಲಿಂಗದಲ್ಲಿ ಅಭೇದ್ಯನೆಂದು ಆದಯ್ಯ ಶರಣರು ಪ್ರತಿಪಾದಿಸುತ್ತಾರೆ.





## ನಂಬಿಕೆ

-ಹುಲಿಕಲ್ ನಾಗರಾಜ, ನಂ. ೧೧೪, ಹಳೇತಿಪ್ಪಸಂದ್ರ, ಎಚ್.ಎ.ಎಲ್. ೨ನೇ ಹಂತ, ಬೆಂಗಳೂರು-೫೬೦ ೦೦೮.

*ನಂಬು, ದೇವರ ನಂಬು ನಂಬೆನ್ನುವುದು ಲೋಕ*
*ಕಂಬನಿಯನಿಡುವಜನ ನಂಬಲೊಲ್ಲದರೇಂ*
*ಹಂಬಲನೆ ತೊರೆದಂಗೆ ನಂಬಿಕೆಯ ಹಂಗೇಕೆ*
*ತುಂಬು ವಿರತಿಯ ಮನದಿಂ ಮಂಕುತಿಮ್ಮ*

ಇದು ಡಿ.ವಿ.ಜಿ. ಯವರ ಮಾತು. ಇವರು ಹೇಳುವಂತೆ ಕಂಬನಿಯನಿಡುವ ಜನ ನಂಬಲೊಲ್ಲರು. ನಂಬಿಕೆಯ ಮಹತ್ವ ಎಂಥಹುದೆಂಬುದನ್ನು ತಿಳಿಯಲಸಮರ್ಥರಾದ ಮೂಢರು. ಪುರಂದರದಾಸರು ಹೇಳುವಂತೆ 'ನಂಬು ನಂಬಲೆ ಮನವೆ ನಂಬದಿರೆ ನೀ ಕೆಡುವೆ' ಎಂಬುದು ಚಂಚಲ ಚಿತ್ತವಾದ ಮನಸ್ಸನ್ನು ಜಾಗೃತಗೊಳಿಸುವಂತಿದೆ.

ಕೊಡು ಕೊಳ್ಳುವ ವ್ಯವಹಾರಿಕ ನಂಬಿಕೆ ಒಂದು ಮತ್ತು ಅಂತರಾತ್ಮ ಸಾಕ್ಷಿಯಾದ ನಂಬಿಕೆ ಮತ್ತೊಂದು. ಪೂರ್ವ ಕಾಲದಲ್ಲಿ ಕೊಡು ಕೊಳ್ಳುವ ವಿಚಾರ ಪ್ರಸ್ತಾಪವಾದಾಗ ಮರಗಿಡವನ್ನೋ, ಸೂರ್ಯಚಂದ್ರರನ್ನೋ ಇಷ್ಟದೈವವನ್ನೋ ಸಾಕ್ಷಿಯಾಗಿಟ್ಟುಕೊಂಡು ವ್ಯವಹರಿಸಿದರೆ, ಧರ್ಮ ಸೂಕ್ಷ್ಮದ ವಿಚಾರ ಪ್ರಸ್ತಾಪವಾದಾಗ ಅಂತರಾತ್ಮ ಸಾಕ್ಷಿಯಾಗಿ 'ನನ್ನಾಣೆ' ಎಂದು ಹೇಳುವುದನ್ನು ಕಂಡಿದ್ದೇವೆ. ಪ್ರಸ್ತುತ, ಕಾನೂನು, ಸಾಕ್ಷಿ ಲೆಕ್ಕಪತ್ರಗಳನ್ನು ಆಧಾರವಾಗಿಟ್ಟುಕೊಂಡು ವ್ಯವಹರಿಸಿದರೂ ಬಹುತೇಕ ವ್ಯತಿರಿಕ್ತ ಬದಲಾವಣೆಗಳನ್ನು ಕಾಣುತ್ತಿದ್ದೇವೆ.

ಪತಿ ಪತ್ನಿಯರಲ್ಲಿ, ತಂದೆ ಮಕ್ಕಳ ನಡುವೆ, ಅಣ್ಣ ತಮ್ಮಂದಿರಲ್ಲಿ, ಬಂಧುಮಿತ್ರರಲ್ಲಿ, ರಾಜ ಮಂತ್ರಿ ನಡುವೆ ನಂಬಿಕೆ ಕಿಂಚಿತ್ ಅವಿಶ್ವಾಸ ತಳೆದರೆ ನೆಮ್ಮದಿಯಿಂದಿರಲು ಸಾಧ್ಯವಿಲ್ಲ. ಹಾಗೂ ಎಲ್ಲಾ ವ್ಯವಹಾರಗಳು ಸ್ಥಗಿತಗೊಂಡು ಜನಜೀವನ ದುಃಖಮಯವಾಗಿ ಅಭ್ಯುದಯ ಕುಂಠಿತ ವಾಗುತ್ತದೆ. ಇಂದು ದೇಶಗಳ ನಡುವೆ ನಂಬಿಕೆ ಕಳೆದು ವಿರಸ ಬೆಳೆದು ಜಗತ್ತು ವಿನಾಶದ ಅಂಚನ್ನು ಮುಟ್ಟುತ್ತಿದೆ. ವಂಚನೆಯನ್ನು ಮರೆತು ನಂಬಿಕೆಯನ್ನು ಅವಲಂಬಿಸದೆ ಹೋದಲ್ಲಿ ಶಾಂತಿ ಸರ್ವಥಾ ದೊರಕದು.

ವಿದ್ಯಾರ್ಥಿಗೆ ಗುರುಗಳಲ್ಲಿ, ರೋಗಿಗೆ, ವೈದ್ಯನಲ್ಲಿ, ಸೇವಕನಿಗೆ ಯಜಮಾನರಲ್ಲಿ, ಭಕ್ತನಿಗೆ ದೇವನಲ್ಲಿ ನಂಬಿಕೆ ಇಲ್ಲದೇ ಹೋದರೆ ಇಷ್ಟಾರ್ಥ ಸಿದ್ಧಿಸದು. ಇದನ್ನೇ ಅಂತರಾತ್ಮ ಸಾಕ್ಷಿಯಾದ ನಂಬಿಕೆ ಎನ್ನುವುದು. ನಂಬಿಕೆಯನ್ನು ಸಾರ್ವಜನಿಕ ಹಾಗೂ ಸಹಕಾರ ಕ್ಷೇತ್ರದಲ್ಲಿ ಹಾಗೂ ವ್ಯವಹಾರ ಲೇವಾದೇವಿ ಕ್ಷೇತ್ರದಲ್ಲಿ ರೂಢಿಸಿ ಕೊಳ್ಳುವುದು ಅವಶ್ಯ. ಸರ್ವಜ್ಞಮೂರ್ತಿ ನಂಬಿಕೆಯ ವಿಷಯವನ್ನು ಪ್ರತಿಪಾದಿಸುತ್ತ

*ನಂಬಿಕೆಯು ಇರುವತನಕ ಕೊಂಬುವುದು ಸಾಲವನು*
*ನಂಬಿಕೆಯು ಕೆಟ್ಟ ಬಳಿಕ ತಾ ಬೇಗೆಯಲಿ*
*ಬೆಂದು ಸತ್ತಂತೆ ಸರ್ವಜ್ಞ*

ಈ ಅರ್ಥಗರ್ಭಿತ ತ್ರಿಪದಿಯಲ್ಲಿ ಸಮಯೋಚಿತ ವ್ಯಾವಹಾರಿಕ ವಿಚಾರವನ್ನು ಬಿಂಬಿಸಿರುವ ಸರ್ವಜ್ಞವಾಣಿ, ಸಾರ್ವಕಾಲಿಕವಾಣಿ.

ದ್ರೋಣಾಚಾರ್ಯರು ಏಕಲವ್ಯನಿಗೆ ನೇರವಾಗಿ ಧನುರ್ವಿಧ್ಯಾಭ್ಯಾಸ ಮಾಡಿಸದಿದ್ದರೂ ತನ್ನಂತರಾತ್ಮದಲ್ಲಿ ದ್ರೋಣರನ್ನೇ ಗುರುವೆಂದು ಭಾವಿಸಿ ನಂಬಿಕೆಯಿಟ್ಟ ಫಲವಾಗಿ ಏಕಲವ್ಯನು ಅಸಾಮಾನ್ಯ ಬಿಲ್ಲುಗಾರನೆಂಬ ಖ್ಯಾತಿ ಪಡೆದನು. ಶ್ರೀರಾಮನನ್ನೇ ನಂಬಿ ಬಂದ ಸುಗ್ರೀವ ವಿಭೀಷಣ ಅನಾಯಾಸವಾಗಿ ತಮ್ಮ ರಾಜ್ಯಕ್ಕೆ ಅಧಿಪತಿಗಳಾದರು. ಪುರಾಣದ ಇಂತಹ ನಿದರ್ಶನಗಳು ನಂಬಿಕೆಯ ಮಹತ್ವವನ್ನು ನಮಗಿಂದು ಜ್ಞಾಪಿಸುತ್ತದೆ. ಪ್ರಹ್ಲಾದರು ನಾರಾಯಣನನ್ನು ನಂಬಿದ್ದರಿಂದಲೇ ಪರಮಾತ್ಮನ ಸಾಕ್ಷಾತ್ಕಾರವಾಯಿತೆಂಬ ಅಂಶವನ್ನು ಡಿ.ವಿ.ಜಿ.ಯವರು ತಮ್ಮ ಮಂಕುತಿಮ್ಮನ ಕಗ್ಗದಲ್ಲಿ ಪ್ರಸ್ತಾಪಿಸಿದ್ದಾರೆ.

*ನಂಬದಿರ್ದನು ತಂದೆ ನಂಬಿದನು ಪ್ರಹ್ಲಾದ*
*ನಂಬಿಯೂ ನಂಬದಿರುವಿಬ್ಬಂದಿ ನೀನು*
*ಕಂಬದಿನೊ ಬಿಂಬದಿನೊ ಮೋಕ್ಷವವರಿಂಗಾಯ್ತು*
*ಸಿಂಬಳದಿನೊಣ ನೀನು ಮಂಕುತಿಮ್ಮ*

ನಂಬಿಕೆ ಎನ್ನುವುದೇ ದೈವ ಎಂಬ ದೃಷ್ಟಾಂತಕ್ಕೆ

ಪ್ರಹ್ಲಾದ-ಹಿರಣ್ಯಕಶಿಪು ಇವರ ಕಥೆಯೇ ಸಾಕ್ಷಿ. ತೀವ್ರ ಶ್ರದ್ಧೆ, ನಂಬಿಕೆ ಫಲ ಕೊಟ್ಟಿತು. ಅರೆಮನಸ್ಸಿನ ಆಂದೋಳನ ನಿಷ್ಫಲ. ನಂಬಿ ಕರೆದರೆ 'ಓ ಎನ್ನನೇ ಶಿವನು' ಎಂದು ಬಸವಣ್ಣ ದೇವರಲ್ಲಿಡಬೇಕಾದ ವಿಶ್ವಾಸದ ಬಗ್ಗೆ ಹೇಳಿದ್ದಾರೆ.

ನಂಬಿಕೆಯ ಬಗ್ಗೆ ಉತ್ತರ ಭಾರತದಲ್ಲಿ ನಡೆದ ಒಂದು ಸತ್ಯ ಸಂಗತಿಯ ಅರಿಯುವುದು ಅವಶ್ಯ.

ಭೈಷಸಾ ಎಂಬುವರು ದೊಡ್ಡ ವ್ಯಾಪಾರಿ. ಎಷ್ಟು ಹಣವಂತರೋ ಅಷ್ಟೇ ಗುಣವಂತರು, ಪ್ರಾಮಾಣಿಕರು, ಅವರ ಖ್ಯಾತಿ ಎಲ್ಲೆಡೆ ಹಬ್ಬಿತ್ತು. ವ್ಯಾಪಾರಿಗಳ ಸಮೂಹದಲ್ಲಿ ಅವರಿಗೆ ತುಂಬಾ ಗೌರವವಿತ್ತು. ಒಮ್ಮೆ ಅವರು ಅಹಮದ್ ನಗರಕ್ಕೆ ಹೋಗಬೇಕಿತ್ತು. ಅಲ್ಲಿ ಆಕಸ್ಮಾತ್ ಹೆಚ್ಚು ಹಣದ ಅವಶ್ಯಕತೆ ಬಿತ್ತು. ತನ್ನ ಸ್ನೇಹಿತರೊಬ್ಬನ ಕೂಡ ಆತನ ಪರಿಚಿತ ವರ್ತಕನ ಬಳಿಗೆ ಹೋದರು. ಆ ಸ್ನೇಹಿತ ಭೈಷಸಾ ಇವರ ಹೆಸರನ್ನು ಪರಿಚಯಿಸಿದ ನಂತರ ಆ ವ್ಯಾಪಾರಿ ಭೈಷಸಾ ಅವರನ್ನು 'ಏನು ಬಂದಿರಿ' ಎಂದು ಕೇಳಿದ. 'ನನಗೆ ಒಂದು ಲಕ್ಷ ಸಾಲ ಬೇಕಾಗಿತ್ತು' ಅಂದರು. ಅದಕ್ಕೊಪ್ಪಿದ ಆತ 'ನಿವೇನು ಒತ್ತೆ ಇಡುತ್ತೀರಿ' ಎಂದು ಮರುಪ್ರಶ್ನೆ ಹಾಕಿದ. ಭೈಷಸಾ ದೊಡ್ಡ ವ್ಯಾಪಾರಿಯೇನೋ ನಿಜ. ಆದರೆ ಆ ಕ್ಷಣದಲ್ಲಿ ಅವರ ಬಳಿ ಬಿಡಿಗಾಸೂ ಇಲ್ಲದ್ದರಿಂದ ಕೊಂಚ ಯೋಚಿಸಿ ತಮ್ಮ ಮೀಸೆಯ ಒಂದು ಕೂದಲನ್ನು ಕಿತ್ತು ಆತನ ಮುಂದಿರಿಸಿ ಹೇಳಿದರು. 'ನೋಡು ಇದನ್ನು ಒತ್ತೆ ಇಡುತ್ತಿದ್ದೇನೆ' ಮರು ಪಾವತಿಯಿಲ್ಲದೆ ಆ ವ್ಯಾಪಾರಿ ಭೈಷಸಾ ಅವರಿಗೆ ಒಂದು ಲಕ್ಷ ರೂ. ಎಣಿಸಿದ.

ಭೈಷಸಾ ತಾವು ಮಾಡಿದ ಸಾಲವನ್ನು ಅವಧಿಗೆ ಮುಂಚೆಯೇ ತೀರಿಸಿದರು. ಆದರೆ ಒತ್ತೆಯಿಟ್ಟ ಕೂದಲನ್ನು ಮರಳಿ ಪಡೆಯಲು ಮರೆಯಲಿಲ್ಲ. ಹೀಗಿತ್ತು ಆ ಕಾಲದ ನಂಬಿಕೆ, ವ್ಯವಹಾರ. ಅಂದು ಹಣಕ್ಕಿಂತ ಬಾಯಿಂದ ಹೊರ ಬರುವ ಮಾತು ಪ್ರಧಾನ ಮೌಲ್ಯವಾಗಿತ್ತು. ಇಂದು ಮಾತಿನ ಮೌಲ್ಯವು ಕುಸಿದು ನಂಬಿಕೆಯು ಸ್ವಲ್ಪಮಟ್ಟಿಗೆ ವ್ಯತಿರಿಕ್ತವಾಗಿ ಪರಿಣಮಿಸುತ್ತಿರುವ ಹಿನ್ನಲೆಯಲ್ಲಿ ಕರಾರು ಪತ್ರಗಳ ಮೂಲಕ ವ್ಯವಹರಿಸುತ್ತಿರುವುದೇ ಕಂಡು ಬರುತ್ತಿದೆ. ಆದರೆ ಕರಾರು ಪತ್ರಕ್ಕೆ ಸಿಗುವ ಕಿಮ್ಮತ್ತು ಕೂಡ ವ್ಯತಿರಿಕ್ತವೇ ಆಗಿದೆ. ಇದು ಈ ಸಮಾಜದ ವಿಪರ್ಯಾಸ! ಕಾಲಾಯ ತಸ್ಮೈ ನಮಃ.

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ -೩

### ದೃಷ್ಟಾರರ ಮಹಿಮೆ

ಸದಾಚಾರದಿ ನಿಂತು ಸ್ವಾರ್ಥವ ತೊರೆದವರ ಹಿರಿಮೆಯನು
ಶ್ಲಾಘಿಪುದು, ಶಾಸ್ತ್ರಗಳ ನಿಯಮವದು.

ಸ್ವಾರ್ಥವ ತೊರೆದ ಋಷಿಗಳ ಹಿರಿಮೆಯನು ಅಳಿವುದು,
ಜಗದಿ ಸತ್ತವರ ಎಣಿಸಿದಂತಹುದು.

ಅರ್ಥ ಮತ್ತು ಕಾಮಗಳ ವಿಚಾರವರಿತು ಧರ್ಮವ ಪಾಲಿಸುವ
ಮುನಿಗಳ ಮಹಿಮೆಯಿಂದ ಬೆಳಗುವುದು ಈ ಜಗವು

ಮನೋಬಲವೆಂಬ ಅಂಕುಶದಿಂದ ಐವರನು ಗೆದ್ದವನು,
ಮೋಕ್ಷವೆಂಬ ನಿಧಿಗೊಂದು ಬೀಜವಾಗುವುದು.

ಐದಿಂದ್ರಿಯಗಳನು ಅಡಗಿಸಿದವನ ಶಕ್ತಿಗೆ, ಸಗ್ಗದೊಡೆಯ
ಇಂದ್ರನೇ ಸಾಕ್ಷಿಯಾಗಿಹನು.

ಮಾಡಲಸಾಧ್ಯವಾದ ಕಾರ್ಯವನು ಮಾಡುವರು ಹಿರಿಯರು;
ಮಾಡಲಸಾಧ್ಯವಾದ ಕಾರ್ಯವನು ಮಾಡರು
ಕಿರಿಯರು;

ರಸ, ರೂಪ, ಸ್ಪರ್ಶ, ಶಬ್ಧ, ಗಂಧಗಳೆಂಬ ಐದರ
ಬಗೆಗಳನು
ಬಲ್ಲವನ ಜ್ಞಾನದಲಿ ನೆಲೆಸಿಹುದೀ ಜಗವು

ಗುಣವೆಂಬ ಶಿಖರವನೇರಿದ ಮುನಿಗಳ ಮುನಿಸಲು,
ಕ್ಷಣ ಹೊತ್ತು ಯಾರಿಂದಲೂ ತಡೆಯಲಾಗದು.

ಧರ್ಮಗುಣದಿಂದಿರುವವರೇ ಸಂತರೆನಿಸಿ ಕೊಳುವವರು;
ಅವರೇ ಸಕಲ ಜೀವಿಗಳಲಿ ದಯೆತೋರುವವರು.





## ಕನ್ನಡದಲ್ಲಿ ಕಾನೂನು ಸಾಹಿತ್ಯ ನಡೆದು ಬಂದ ದಾರಿ

-ಎಂ.ಎಂ. ಹೂಲಿ, ನ್ಯಾಯವಾದಿ, ಹುಬ್ಬಳ್ಳಿ-೨೪ ಧಾರವಾಡ ಜಿಲ್ಲೆ.

ನಮ್ಮ ನಾಡಿನಲ್ಲಿ ನೂರಾರು ವರ್ಷಗಳ ಹಿಂದಿನಿಂದಲೂ ಸರಕಾರದ ವ್ಯವಹಾರ ಕನ್ನಡದಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಅನೇಕ ದಾಖಲೆಗಳಿವೆ. ನಮಗೆ ಸ್ವರಾಜ್ಯ ಪ್ರಾಪ್ತಿ ಆದಮೇಲೆ ನಮ್ಮ ಸಂವಿಧಾನದಲ್ಲಿ ರಾಜ್ಯ ಭಾಷೆಗಳ ಬಗ್ಗೆ ಸ್ಪಷ್ಟ ನೀತಿಯನ್ನು ಪ್ರತಿಪಾದಿಸಲಾಗಿದೆ. ಕರ್ನಾಟಕ ರಾಜ್ಯ ಸರಕಾರವು ಸಂವಿಧಾನದಲ್ಲಿ ರಾಜ್ಯ ಭಾಷೆಗಳಿಗೆ ಸಂಬಂಧಪಟ್ಟಂತೆ ಇರುವ ನಿಬಂಧನೆಗಳ ಪ್ರಕಾರ 'ಕನ್ನಡವು ಕರ್ನಾಟಕ ರಾಜ್ಯ ಭಾಷೆ' ಎಂಬ ಘೋಷಣೆಯನ್ನು ೧೯೬೩ರಲ್ಲಿ ಮಾಡಿದೆ. ಇದರಿಂದ ಕರ್ನಾಟಕ ರಾಜ್ಯದಲ್ಲಿ ಆಡಳಿತ ಭಾಷೆ ಕನ್ನಡ ಅಲ್ಲದೇ ಬೇರೆ ಯಾವ ಭಾಷೆ ಅಲ್ಲ ಎಂಬ ಮಾತು ಸ್ಪಷ್ಟವಾಗಿದೆ.

ಇದನ್ನು ಒಪ್ಪಿಕೊಂಡ ಮೇಲೆ ರಾಜ್ಯ ಸರ್ಕಾರವು ಕನ್ನಡವನ್ನು ಜಾರಿಗೆ ತರಲು ಅನೇಕ ಕ್ರಮಗಳನ್ನು ಕಾಲಕಾಲಕ್ಕೆ ಕೈಕೊಂಡಿದೆ. ಅವುಗಳಲ್ಲಿ ಪ್ರಮುಖವಾದವುಗಳು

೧) ೧೯೬೮ರಲ್ಲಿ ತಾಲೂಕು ಮಟ್ಟದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬೆಳೆಸಲು ನಿರ್ಣಯವನ್ನು ತೆಗೆದುಕೊಂಡು ಅದನ್ನು ಕಾರ್ಯಗತ ಮಾಡಲು ಪ್ರಯತ್ನ ನಡೆಸಿತು.

೨) ೧-೧-೧೯೭೦ ರಿಂದ ರಾಜ್ಯದ ಉಪವಿಭಾಗ ಮಟ್ಟದ ಎಲ್ಲ ಕಾರ್ಯಾಲಯಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಲು ಹಾಗೂ ಕ್ರಮೇಣ ಹಂತಹಂತವಾಗಿ ಜಾರಿಗೆ ತರಲು ಕನ್ನಡ ಭಾಷಾ ಸಮಿತಿ ನಿಯಮಿಸಿ ಅದರ ಅಭಿಪ್ರಾಯ ಪಡೆದು ಯೋಜನೆಗಳು ಕಾರ್ಯಗತವಾದವು.

ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ನಾಡಿನಲ್ಲಿರುವ ಎಲ್ಲ ಕನ್ನಡ ಸಂಘ ಸಂಸ್ಥೆಗಳು ರಾಜ್ಯ ಭಾಷಾ ವರ್ಷದಲ್ಲಿ ಕನ್ನಡ ಆಡಳಿತ ಭಾಷೆಯಾಗಲು ಸಹಾಯಕವಾಗುವಂತಹ ಕಾರ್ಯಕ್ರಮಗಳನ್ನು ಏರ್ಪಡಿಸಿದವು.

ಜನರಿಗೆ ನ್ಯಾಯವನ್ನು ಒದಗಿಸಬೇಕು ಮತ್ತು ಸಾಮಾಜಿಕ ನ್ಯಾಯವನ್ನು ಪಾಲಿಸಬೇಕು ಎನ್ನುವ ಮಾತುಗಳು ನಿಜವಾಗ ಬೇಕಾದರೆ, ಜನಸಾಮಾನ್ಯರ ಭಾಷೆಯಾದ ಕನ್ನಡಲ್ಲಿ ಎಲ್ಲ ಕಾನೂನು ಮಾಹಿತಿ ದೊರೆಯಬೇಕು. 'ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಕಾನೂನುಗಳು ದೊರೆಯಬೇಕು' ಎನ್ನುವ ಪ್ರಜಾಪ್ರಭುತ್ವದ ತತ್ವಕ್ಕೆ ಅನುಗುಣವಾಗಿ ಕರ್ನಾಟಕ ವಿಶ್ವವಿದ್ಯಾಲಯವು ಅನೇಕ ಕಾನೂನು ಪುಸ್ತಕಗಳ ಪ್ರಕಟಣೆ ಕೈಗೊಂಡಿದೆ. ಅದೇ ರೀತಿ ಕನ್ನಡ ವಿಶ್ವವಿದ್ಯಾಲಯ, ಶ್ರೀಸಾಮಾನ್ಯರಿಗೆ ಕಾನೂನು ಎನ್ನುವ ಮಾಲಿಕೆಯಲ್ಲಿ ಆರು ಪುಸ್ತಕಗಳನ್ನು ಪ್ರಕಟಿಸಿದೆ. ಕರ್ನಾಟಕ ಸರಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ 'ಜನಸಾಮಾನ್ಯರಿಗೆ ಕಾನೂನು ಪರಿಚಯ' ಕುರಿತು ಪುಸ್ತಕಗಳನ್ನು ಪ್ರಕಟಿಸಿದೆ.

**ಕಾನೂನು ಸಾಹಿತ್ಯ :**

ಕಾನೂನು ಸಾಹಿತ್ಯ ರಚನೆಯ ಈ ಉಪಕ್ರಮಕ್ಕೆ ಏನಿಲ್ಲೆಂದರೂ ಸುಮಾರು ೧೫೦ ವರ್ಷಗಳ ಇತಿಹಾಸವಿದೆ. ಬರವಣಿಗೆಯ ಪದ್ಧತಿಯಲ್ಲಿ ಹಲವು ಬದಲಾವಣೆಗಳನ್ನು ಗುರುತಿಸಬಹುದು ನಿಜ. ಮೊದಮೊದಲಿಗೆ ಉರ್ದು, ಫರ್ಶಿಯನ್ ಪದಗಳು ವಿಪರೀತವಾಗಿ ಸೇರಿದ ಭಾಷಾಂತರ ಶೈಲಿ ಇಂದು ಒಂದು ಪಾಕ ಹೊಂದುತ್ತಿದೆ. ಕಾನೂನು ಕ್ಲಿಷ್ಟ ವಿಷಯ, ಅದರ ಅನುವಾದ ಮತ್ತಷ್ಟು ಕ್ಲಿಷ್ಟ. ನ್ಯಾಯಾಧೀಶರಿಗೂ ವಕೀಲರಿಗೂ ವಾದಿ ಪ್ರತಿವಾದಿಗಳಿಗೂ ಜನ ಸಾಮಾನ್ಯರಿಗೂ ತಿಳಿಯುವ ಭಾಷೆಯಲ್ಲಿ ಕಾನೂನು ಒದಗಿ ಬರಬೇಕು. ಕಾನೂನು ಗ್ರಂಥಗಳು ಸುಲಭವಾದು ಕನ್ನಡದಲ್ಲಿ ಬರೆಯಲ್ಪಡಬೇಕು. ಅಷ್ಟು ದೀರ್ಘವಲ್ಲದಿದ್ದರೂ ಇದಕ್ಕೊಂದು ಪರಂಪರೆ ಇದೆ. ನಮ್ಮ ಸುದೈವವೆಂದರೆ ಈಗ ಪ್ರಭುತ್ವದ ನೆರವೂ ಇದೆ. ಭಾಷಾಂತರ ಸಂಗ್ರಹ, ಸಂಗ್ರಹಾನುವಾದ, ಸಂದರ್ಭ ಗ್ರಂಥರಚನೆ, ಸ್ವತಂತ್ರ ಕೃತಿಗಳ ರಚನೆ ಇವೆಲ್ಲವೂ ಬೇಕು.

ಯಾವುದೇ ಬಹುಮಾನ, ಪುರಸ್ಕಾರ, ಸನ್ಮಾನ, ಸಮ್ಮೇಳನ ಇಲ್ಲದೇ ಇರುವಾಗ ಎಷ್ಟೋ ಜನರು ಈ ಹಿಂದೆಯೇ ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಗೆ ಬರಬೇಕೆಂದು ವಾದಿಸಿ, ಪ್ರಯತ್ನಿಸಿ, ತಮ್ಮ ಸೇವೆಯನ್ನು ಸಲ್ಲಿಸಿದ್ದುಂಟು. ೧೮೯೬ರಷ್ಟು ಹಿಂದೆಯೇ ಕನ್ನಡದಲ್ಲಿ ತೀರ್ಪುಗಳನ್ನು ನೀಡಲಾಗಿತ್ತು ಎಂಬುದನ್ನು ಗಮನಿಸಿದಾಗ ಸ್ವಾತಂತ್ರ್ಯನಂತರದ ಜನರಲ್ಲಿ ಇಂಗ್ಲೀಷ ಭಾಷೆಯ ಬಗ್ಗೆ ಒಣ ವ್ಯಾಮೋಹ ಬೆಳೆದು ಕನ್ನಡ ಬಳಕೆಯು ಹಿಂದೆ ಸರಿಯಿತು ಎಂದು ಅನಿಸುತ್ತದೆ.

ಕನ್ನಡವು ಕರ್ನಾಟಕ ರಾಜ್ಯದ ಅಧಿಕೃತ ಆಡಳಿತ ಭಾಷೆಯಾಗುವ ಪೂರ್ವದಲ್ಲೂ ಅನೇಕ ಮಹನೀಯರು ಕಾನೂನಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಗ್ರಂಥ ರಚನೆ ಮಾಡಿರುವುದು ಕಂಡು ಬರುತ್ತದೆ. ನಂಜುಂಡಯ್ಯನವರು 'ವ್ಯವಹಾರಿಕೆ ದೀಪಿಕೆ' ಗ್ರಂಥವನ್ನು ಹೊರ ತಂದರೆ, ನ್ಯಾಯಾಧೀಶರಾಗಿದ್ದ ಶ್ರೀ ಹನುಮಂತ ವೆಂಕಟೇಶ ಚೆನ್ನಮುಳ ಗುಂದರು(೧೮೯೬) ಹಿಂದೂ ಧರ್ಮಶಾಸ್ತ್ರವನ್ನು ಪ್ರಕಟಿಸಿದರು. ಹಾಗೆಯೇ ಪ್ರಾಥಮಿಕ ಶಾಲೆಯ

# ತಿರುಕ್ಕುರಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ –೩

## ದೃಷ್ಟಾರರ ಮಹಿಮೆ

ಸದಾಚಾರದಿ ನಿಂತು ಸ್ವಾರ್ಥವ ತೊರೆದವರ ಹಿರಿಮೆಯನು
ಶ್ಲಾಘಿಪುದು, ಶಾಸ್ತ್ರಗಳ ನಿಯಮವದು.

ಸ್ವಾರ್ಥವ ತೊರೆದ ಋಷಿಗಳ ಹಿರಿಮೆಯನು ಅಳಿವುದು,
ಜಗದಿ ಸತ್ತವರ ಎಣಿಸಿದಂತಹುದು.

ಅರ್ಥ ಮತ್ತು ಕಾಮಗಳ ವಿಚಾರವರಿತು ಧರ್ಮವ ಪಾಲಿಸುವ
ಮುನಿಗಳ ಮಹಿಮೆಯಿಂದ ಬೆಳಗುವುದು ಈ ಜಗವು

ಮನೋಬಲವೆಂಬ ಅಂಕುಶದಿಂದ ಐವರನು ಗೆದ್ದವನು,
ಮೋಕ್ಷವೆಂಬ ನಿಧಿಗೊಂದು ಬೀಜವಾಗುವುದು.

ಐದಿಂದ್ರಿಯಗಳನು ಅಡಗಿಸಿದವನ ಶಕ್ತಿಗೆ, ಸಗ್ಗದೊಡೆಯ
ಇಂದ್ರನೇ ಸಾಕ್ಷಿಯಾಗಿಹನು.

ಮಾಡಲಸಾಧ್ಯವಾದ ಕಾರ್ಯವನು ಮಾಡುವರು ಹಿರಿಯರು;
ಮಾಡಲಸಾಧ್ಯವಾದ ಕಾರ್ಯವನು ಮಾಡರು
ಕಿರಿಯರು;

ರಸ, ರೂಪ, ಸ್ಪರ್ಶ, ಶಬ್ಧ, ಗಂಧಗಳೆಂಬ ಐದರ
ಬಗೆಗಳನು
ಬಲ್ಲವನ ಜ್ಞಾನದಲಿ ನೆಲೆಸಿಹುದೀ ಜಗವು

ಗುಣವೆಂಬ ಶಿಖರವನೇರಿದ ಮುನಿಗಳ ಮುನಿಸಲು,
ಕ್ಷಣ ಹೊತ್ತು ಯಾರಿಂದಲೂ ತಡೆಯಲಾಗದು.



# ಕನ್ನಡದಲ್ಲಿ ಕಾನೂನು ಸಾಹಿ

–ಎಂ.ಎಂ. ಹೂಲಿ, ನ್ಯಾಯವಾದಿ,

ನಮ್ಮ ನಾಡಿನಲ್ಲಿ ನೂರಾರು ವರ್ಷಗಳ ಹಿಂದಿನಿಂದಲೂ ಸರಕಾರದ ವ್ಯವಹಾರ ಕನ್ನಡದಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಅನೇಕ ದಾಖಲೆಗಳಿವೆ. ನಮಗೆ ಸ್ವರಾಜ್ಯ ಪ್ರಾಪ್ತಿ ಆದಮೇಲೆ ನಮ್ಮ ಸಂವಿಧಾನದಲ್ಲಿ ರಾಜ್ಯ ಭಾಷೆಗಳ ಬಗ್ಗೆ ಸ್ಪಷ್ಟ ನೀತಿಯನ್ನು ಪ್ರತಿಪಾದಿಸಲಾಗಿದೆ. ಕರ್ನಾಟಕ ರಾಜ್ಯ ಸರಕಾರವು ಸಂವಿಧಾನದಲ್ಲಿ ರಾಜ್ಯ ಭಾಷೆಗಳಿಗೆ ಸಂಬಂಧಪಟ್ಟಂತೆ ಇರುವ ನಿಬಂಧನೆಗಳ ಪ್ರಕಾರ 'ಕನ್ನಡವು ಕರ್ನಾಟಕ ರಾಜ್ಯ ಭಾಷೆ' ಎಂಬ ಘೋಷಣೆಯನ್ನು ೧೯೬೩ರಲ್ಲಿ ಮಾಡಿದೆ. ಇದರಿಂದ ಕರ್ನಾಟಕ ರಾಜ್ಯದಲ್ಲಿ ಆಡಳಿತ ಭಾಷೆ ಕನ್ನಡ ಅಲ್ಲದೇ ಬೇರೆ ಯಾವ ಭಾಷೆ ಅಲ್ಲ ಎಂಬ ಮಾತು ಸ್ಪಷ್ಟವಾಗಿದೆ.

ಇದನ್ನು ಒಪ್ಪಿಕೊಂಡ ಮೇಲೆ ರಾಜ್ಯ ಸರ್ಕಾರವು ಕನ್ನಡವನ್ನು ಜಾರಿಗೆ ತರಲು ಅನೇಕ ಕ್ರಮಗಳನ್ನು ಕಾಲಕಾಲಕ್ಕೆ ಕೈಕೊಂಡಿದೆ. ಅವುಗಳಲ್ಲಿ ಪ್ರಮುಖವಾದವುಗಳು
೧) ೧೯೬೮ರಲ್ಲಿ ತಾಲೂಕು ಮಟ್ಟದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬೆಳೆಸಲು ನಿರ್ಣಯವನ್ನು ತೆಗೆದುಕೊಂಡು ಅದನ್ನು ಕಾರ್ಯಗತ ಮಾಡಲು ಪ್ರಯತ್ನ ನಡೆಸಿತು.
೨) ೧-೧-೧೯೭೦ ರಿಂದ ರಾಜ್ಯದ ಉಪವಿಭಾಗ ಮಟ್ಟದ ಎಲ್ಲ ಕಾರ್ಯಾಲಯಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಲು ಹಾಗೂ ಕ್ರಮೇಣ ಹಂತಹಂತವಾಗಿ ಜಾರಿಗೆ ತರಲು ಕನ್ನಡ ಭಾಷಾ ಸಮಿತಿ ನಿಯಮಿಸಿ ಅದರ ಅಭಿಪ್ರಾಯ ಪಡೆದು ಯೋಜನೆಗಳು ಕಾರ್ಯಗತವಾದವು.

ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ನಾಡಿನಲ್ಲಿರುವ ಎಲ್ಲ ಕನ್ನಡ ಸಂಘ ಸಂಸ್ಥೆಗಳು ರಾಜ್ಯ ಭಾಷಾ ವರ್ಷದಲ್ಲಿ ಕನ್ನಡ ಆಡಳಿತ ಭಾಷೆಯಾಗಲು ಸಹಾಯಕವಾಗುವಂತಹ ಕಾರ್ಯಕ್ರಮಗಳನ್ನು ಏರ್ಪಡಿಸಿದವು.

ಜನರಿಗೆ ನ್ಯಾಯವನ್ನು ಒದಗಿಸಬೇಕು ಮತ್ತು ಸಾಮಾಜಿಕ ನ್ಯಾಯವನ್ನು ಪಾಲಿಸಬೇಕು ಎನ್ನುವ ಮಾತುಗಳು ನಿಜವಾಗ ಬೇಕಾದರೆ, ಜನಸಾಮಾನ್ಯರ ಭಾಷೆಯಾದ ಕನ್ನಡದಲ್ಲಿ ಎಲ್ಲ ಕಾನೂನು ಮಾಹಿತಿ ದೊರೆಯಬೇಕು. 'ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಕಾನೂನುಗಳು ದೊರೆಯಬೇಕು' ಎನ್ನುವ ಪ್ರಜಾಪ್ರಭುತ್ವದ ತತ್ವಕ್ಕೆ ಅನುಗುಣವಾಗಿ ಕರ್ನಾಟಕ ವಿಶ್ವವಿದ್ಯಾಲಯವು ಅನೇಕ ಕಾನೂನು ಪುಸ್ತಕಗಳ ಪ್ರಕಟಣೆ ಕೈಗೊಂಡಿದೆ. ಅದೇ ರೀತಿ ಕನ್ನಡ ವಿಶ್ವವಿದ್ಯಾಲಯ,

ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ಶರಭಪ್ಪ ವೀರಪ್ಪ ಮೆಣಸಿನಕಾಯಿ ಎಂಬುವರು(೧೯೦೧) ವ್ಯವಹಾರ ಮಿತ್ರ ಕಾನೂನು ಗ್ರಂಥ ಪ್ರಕಟಿಸಿದರು. ಇದಕ್ಕೆ ಆಗಿನ ಧಾರವಾಡ ಜಿಲ್ಲಾ ನ್ಯಾಯಾಧೀಶರಾಗಿದ್ದ ಶ್ರೀ ಎನ್. ಎಸ್. ಲೋಕೂರ ಅವರು ಮುನ್ನುಡಿ ಬರೆದದ್ದುಂಟು. ಈ ರೀತಿಯಾಗಿ ಸಾಮಾನ್ಯ ನಾಗರೀಕರು, ನ್ಯಾಯಾಧೀಶರು, ಪೋಲೀಸ್ ಅಧಿಕಾರಿಗಳು ಕನ್ನಡದಲ್ಲಿ ಕಾನೂನು ಸಾಹಿತ್ಯ ಬೆಳೆದು ಬರಲು ಕಾರಣರಾಗಿದ್ದರೆಂದು ತಿಳಿಯುತ್ತದೆ.

ಧಾರವಾಡದ ಪ್ರಸಿದ್ಧ ನ್ಯಾಯವಾದಿಗಳಾಗಿದ್ದ ಶ್ರೀ ಗದಿಗೆಯ್ಯ ಹೊನ್ನಾಪುರಮಠ(೧೯೩೩)ರು ಕನ್ನಡಲ್ಲಿ 'ದಿವಾಣಿ ಕಾಯ್ದೆ ಬೋಧಿನಿ' 'ಗ್ರಾಮ ಪೋಲೀಸ್ ಮ್ಯಾನುವೆಲ್' 'ಗ್ರಾಮ ಪಂಚಾಯಿತಿ ಆಕ್ಟ್' 'ಮಾಮಲೇದಾರ ಕೋರ್ಟ್ ಆಕ್ಟ್' 'ಗ್ರಾಮ ಪೋಲೀಸ್ ಆಕ್ಟ್', 'ವತನ ಆಕ್ಟ್' ಮೊದಲಾದ ಅನೇಕ ಕಾನೂನು ಗ್ರಂಥಗಳನ್ನು ರಚಿಸಿದ್ದರಲ್ಲದೆ, ಅವು ಆ ಕಾಲಕ್ಕಾಗಲೇ ಆರು ಆವೃತ್ತಿಗಳನ್ನು ಕಂಡಿದ್ದವೆಂದರೆ ಅವುಗಳ ಜನಪ್ರಿಯತೆಯ ಅರಿವಾಗುತ್ತದೆ. ಅಭಿಮಾನವೂ ಮೂಡಿ ಬರುತ್ತದೆ. ಹುಬ್ಬಳ್ಳಿಯ ವಕೀಲರಾಗಿದ್ದ ಶ್ರೀ ತಬೀಬ(೧೯೨೦) ಅವರು ದಿವಾಣು ಕಾಯ್ದೆ ಪರಿಜ್ಞಾನ, ಶ್ರೀ ಎಂ.ಎಸ್. ವೀರಾಪುರ ವಕೀಲರು(೧೮೪೬) ಮುಂಬೈ ಮಾರಾಟಗಾರ ಕಾಯಿದೆ, ಶ್ರೀನಿವಾಸ ಐರಣಿಯವರು ಹಿಂದೂ ಕೋಡ್ ಮಸೂದೆ, ಶ್ರೀ ದೇಶಪಾಂಡೆ ರಾಮರಾಯರು ತಲಾರಿಯವರ ಕೈಪಿಡಿ, ಪೋಲೀಸ್ ಅಧಿಕಾರಿಯಾಗಿದ್ದ ಶ್ರೀ ಭೀಮರಾಯ ಕಲಕೋಟಿ ಅವರು(೧೯೩೦) ಪೋಲೀಸ್ ಗಾಯಿಡ್ ಗ್ರಂಥ ರಚಿಸಿದರು. ಶಿವಮೊಗ್ಗೆಯ ಶ್ರೀ ಡಿ. ಈಶ್ವರಭಟ್ಟರು(೧೯೩೬) 'ಭಾರತ ವಿವಾಹ ಶಾಸನಗಳು' ಎಂಬ ಗ್ರಂಥವನ್ನು ಮಂಗಳೂರು ಜಿಲ್ಲಾ ಕದ್ರಿಯಲ್ಲಿ ಪ್ರಕಟಿಸಿದರು. ಧಾರವಾಡದ ಶ್ರೀ ರಂಗನಾಥ ನೆಗಳೂರರು ಹತ್ತಾರು ಕಾನೂನು ಗ್ರಂಥಗಳನ್ನು ರಚಿಸಿದರು. ಶ್ರೀ ಎಚ್.ಎಂ. ದೇಶಪಾಂಡೆಯವರು 'ಮೈಸೂರು ಪಂಚಾಯತ್ ಸೆಕ್ರೆಟರಿ ನಿಯಮಗಳು ಹಾಗೂ ಬಾಡಿಗೆ ನಿಯಂತ್ರಣ ಕಾಯಿದೆ' ಎಂಬ ಗ್ರಂಥಗಳನ್ನು ಹೊರತಂದರು. ಬೆಳಗಾವಿಯಲ್ಲಿ ವಕೀಲ ವೃತ್ತಿಯನ್ನು ಮಾಡುತ್ತಿದ್ದ ಕಾದಂಬರಿಕಾರ ಶ್ರೀ ರಂಗರಾವ ತಲಚೇರಕರ ಅವರು ೨೦ಕ್ಕೂ ಹೆಚ್ಚು ಕಾನೂನು ಗ್ರಂಥಗಳನ್ನು ಕನ್ನಡಲ್ಲಿ ನೀಡಿದ್ದಾರೆ. ಧಾರವಾಡ ವಕೀಲರಾದ ಎ.ಎನ್. ಕಾಮತ್, ಆರ್.ವ್ಹಿ. ಜತಾರ ಅವರು ತಮ್ಮ ಮಾತೃಭಾಷೆ ಮರಾಠಿ ಆಗಿದ್ದಾಗಲೂ ಕನ್ನಡದಲ್ಲಿ ಕಾನೂನು ಸಾಹಿತ್ಯ ರಚಿಸಿ ಕೀರ್ತಿಭಾಜನರಾಗಿದ್ದಾರೆ. ನಿವೃತ್ತ ನ್ಯಾಯಾಧೀಶರಾಗಿದ್ದ ಸೇವ ನೇಮಿರಾಜ ಮಲ್ಲರು ಹರಪನಹಳ್ಳಿಯ ಪ್ರಸಿದ್ಧ ವಕೀಲರಾದ ಎಚ್. ವೀರಭದ್ರಯ್ಯನವರು, ಕಲಬುರ್ಗಿ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಶ್ರೀ ಜಯತೀರ್ಥ ರಾಜಪುರೋಹಿತ ಅವರು ಭಾಷೆ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯದ ನಿರ್ದೇಶಕರಾಗಿ ಅಧಿಕಾರ ವಹಿಸಿಕೊಂಡ ನಂತರ ಇಡಿ ರಾಜ್ಯ ತುಂಬೆಲ್ಲಾ ವಿಚಾರ ಗೋಷ್ಠಿ ಮುಂತಾದ ಮುಂತಾದ ಕಾರ್ಯಕ್ರಮಗಳನ್ನು ರೂಪಿಸಿ ಹೊಸ ಚೈತನ್ಯವನ್ನು ತುಂಬಿದ್ದರು. ಹಿರಿಯ ನ್ಯಾಯವಾದಿ ಕೋ. ಚೆನ್ನಬಸಪ್ಪ ಅವರು ಕಾನೂನು ಸಾಹಿತ್ಯ ನಿರ್ಮಾಣ ಕಾರ್ಯದಲ್ಲಿ ಪ್ರಶಂಸನೀಯವಾದ ಕಾರ್ಯ ಮಾಡಿದ್ದಾರೆ. ಹಾಗೂ ಅಭಿನಂದನೆಗೆ ಪಾತ್ರರಾಗಿದ್ದಾರೆ. ಅದೇ ರೀತಿ ಹೆಸರುಗಳೆಂದರೆ ಪ್ರೊ. ಎಸ್.ಸಿ. ಹಿರೇಮಠ ಹಾಗೂ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎನ್.ಎಸ್. ಸಂಗೊಳ್ಳಿಯವರು. ಶ್ರೀ ಸಂಗೊಳ್ಳಿಯವರು ಅನೇಕ ಕಾನೂನು ಪುಸ್ತಕಗಳನ್ನು ಹೊರತಂದಿದ್ದಾರೆ.

೧) ನ್ಯಾಯಶಾಸ್ತ್ರ ಪ್ರವೇಶಿಕೆ ೨) ಭಾರತ ದಂಡಸಂಹಿತೆ ೩) ದಂಡ ಪ್ರಕ್ರಿಯಾ ಸಂಹಿತೆ ೪) ಭಾರತ ಸಾಕ್ಷ್ಯ ಅಧಿನಿಯಮ ೫) ಪಾಲುಗಾರಿಕೆ ಅಧಿನಿಯಮ ೬) ಕರ್ನಾಟಕ ವಿವಾಹ ಅಧಿನಿಯಮ ೭) ಭಾರತದ ಸಂವಿಧಾನ ೮) ಅಪರಾಧಿಕ ಕಾನೂನಿನ ಮೂಲತತ್ವಗಳು ೯) ಅಂತರಾಷ್ಟ್ರೀಯ ಕಾನೂನು ೧೦) ಸ್ವತ್ತು ವರ್ಗಾವಣೆ ಅಧಿನಿಯಮ ೧೧) ಭಾರತ ನೋಂದಣಿ ಅಧಿನಿಯಮ ೧೨) ಭಾರತ ಸಂವಿಧಾನೀಯ ಕಾನೂನು ಇತಿಹಾಸ ೧೩) ಪೋಲೀಸ್ ಅಧಿನಿಯಮ ೧೪) ವಧು-ವರದಕ್ಷಿಣಾ ನಿಷೇಧ ಅಧಿನಿಯಮ-೧೯೬೧, ೧೫) ಮಾದಕ ಔಷಧಗಳ ಮತ್ತು ಮನೋಪರಿಣಾಮಕ ವಸ್ತುಗಳ ಅಧಿನಿಯಮ ನಿಯಮಗಳು ಹಾಗೂ ಕರ್ನಾಟಕ ನಿಯಮಗಳು.

ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳು ಕನ್ನಡದಲ್ಲಿ ಕಾನೂನು ಸಾಹಿತ್ಯ ಪ್ರಕಟಿಸುವಲ್ಲಿ ಸಾಕಷ್ಟು ಕಾರ್ಯ ಮಾಡಿವೆ. ಕರ್ನಾಟಕ ಸರಕಾರದ ಭಾಷಾ ನಿರ್ದೇಶನಾಲಯ ಹಾಗೂ ರಾಜ್ಯ ಭಾಷಾ ಆಯೋಗವು ಚಿರಸ್ಮರಣೀಯ ಕಾರ್ಯಗೈದಿವೆ. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಎಲ್.ಎಲ್.ಬಿ. ಪರೀಕ್ಷೆಯನ್ನು ಕನ್ನಡದಲ್ಲಿ ಉತ್ತರ ಬರೆಯಲು ಅನುಮತಿ ನೀಡಿದ್ದರ ಫಲವಾಗಿ, ಕನ್ನಡದಲ್ಲಿ ಕಾನೂನು ಪುಸ್ತಕಗಳ ಬೇಡಿಕೆ ಹೆಚ್ಚಾಗುತ್ತಿದೆ. ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರು ಪ್ರೊ. ಎಸ್.ಸಿ. ಹಿರೇಮಠ ಅವರು ಹಿಂದೂ ವಾರಸಾ ಕಾನೂನು ಗ್ರಂಥಕ್ಕೆ(ಪ್ರಥಮ) ಶ್ರೀ ಆರ್.ವಿ. ಜತಾರ ಅವರ ಹಿಂದೂ ವಾರಸಾ ಕಾನೂನು ಗ್ರಂಥಕ್ಕೆ (ದ್ವಿತೀಯ) ಪುರಸ್ಕಾರಗಳನ್ನು ನಿಡಿ ಉತ್ತೇಜನ ನೀಡಿದೆ. ೨೦೦೬ರಲ್ಲಿ ನವ ಕರ್ನಾಟಕ ಪ್ರಕಾಶಕರಿಂದ 'ನಿತ್ಯ ಜೀವನದಲ್ಲಿ ಕಾನೂನು ಪುಸ್ತಕ' ಎಂಬ ಪುಸ್ತಕವನ್ನು ನ್ಯಾಯವಾದಿ ಶ್ರೀ ಎಸ್.ಆರ್. ಗೌತಮ ಇವರಿಂದ ಹೊರತಂದಿದೆ. ಕನ್ನಡ ಜಾಗೃತಿ ಸಂಘ ವಕೀಲ ವೇದಿಕೆ ಸಹ ಅನೇಕ ಕಾನೂನು





ಪುಸ್ತಕಗಳನ್ನು ಹೊರತರಲು ಕಾರಣವಾಗಿದೆ. ಕನ್ನಡದಲ್ಲಿ ಕಾನೂನು ಸಾಹಿತ್ಯವು ವಿಪುಲವಾಗಿ ಬೆಳೆಯಲು ಒಳ್ಳೆ ವಾತಾವರಣ ನಿರ್ಮಾಣಗೊಂಡಿದೆ. ಕನ್ನಡದಲ್ಲಿ ಕಾನೂನು ಸಾಹಿತ್ಯ ರಚನೆಯಲ್ಲಿ ತೊಡಗಿದವರು ಅನೇಕರಿದ್ದಾರೆ. ಆದರೆ ಕೆಲವರನ್ನು ಮಾತ್ರ ಇಲ್ಲಿ ಉಲ್ಲೇಖಿಸಿದ್ದೇನೆ. ಕನ್ನಡದಲ್ಲಿ ಕಾನೂನು ಸಾಹಿತ್ಯ ಬರಬೇಕೆಂಬುದು ಮುಖ್ಯ ಧ್ಯೇಯ. ಶ್ರೀ ಸಾಮಾನ್ಯರಿಗೂ ನ್ಯಾಯಾಲಯಗಳ ಕಾರ್ಯ ಕಲಾಪಗಳು ಅರ್ಥವಾಗಬೇಕೆನ್ನುವುದಾಗಿದೆ.

೧೯೮೦ರಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತದ ಕನ್ನಡ ಸಾಹಿತ್ಯ ಸಮ್ಮೇಳನದದಲ್ಲಿ ಇಂತಹ ಕಾನೂನು ಗೋಷ್ಠಿ ಏರ್ಪಡಿಸಲಾಗಿತ್ತು. ಆಗ ಸಮ್ಮೇಳನಾಧ್ಯಕ್ಷರಾಗಿದ್ದವರು ಹೆಸರಾಂತ ಕಾದಂಬರಿಕಾರ ಶ್ರೀ ಬಸವರಾಜ ಕಟ್ಟೀಮನಿಯವರು ಹಾಗೂ ಕಾನೂನು ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದವರು ಕರ್ನಾಟಕ ಹೈಕೋರ್ಟಿನ ನ್ಯಾಯಾಧೀಶರಾಗಿದ್ದ ಶ್ರೀ ಕೆ. ಭೀಮಯ್ಯನವರು. ಈ ಕಾನೂನು ಗೋಷ್ಠಿಯನ್ನು ಕರ್ನಾಟಕದ ಹೈಕೋರ್ಟಿನ ಮುಖ್ಯ ನ್ಯಾಯಮೂರ್ತಿಗಳಾಗಿದ್ದ ಶ್ರೀ ಡಿ.ಎಮ್. ಚಂದ್ರಶೇಖರ್‌ರವರು ಉದ್ಘಾಟಿಸಿದರು.

**ಆಡಳಿತ ಸಾಹಿತ್ಯ :**

ಭಾಷಾ ನಿರ್ದೇಶನಾಲಯದವರೂ ಹಾಗೂ ರಾಜ್ಯ ಭಾಷಾ ಆಯೋಗದವರೂ ಸೇರಿ ಸಾಕಷ್ಟು ಆಡಳಿತ ಸಾಹಿತ್ಯ ಹಾಗೂ ಕಾನೂನು ಸಾಹಿತ್ಯವನ್ನು ಜನತೆಗೆ ನೀಡಿದ್ದಾರೆ. ಕರ್ನಾಟಕ ಸರಕಾರದ ಸೇವಾ ನಿಯಮಾವಳಿ, ಕರ್ನಾಟಕ ಆರ್ಥಿಕ ಸಂಹಿತೆ, ಸಾದಿಲ್ವಾರು ವೆಚ್ಚಗಳ ಕೈಪಿಡಿ ಮಾದರಿ ಕಾನೂನು, ಪದನಾಮ ಕೋಶ, ಸಿವಿಲ್ ವ್ಯವಹಾರ ನಿಯಮಾವಳಿ, ಕಾನೂನು ಪದಕೋಶ ಇವೇ ಮೊದಲಾದ ಉಪಯುಕ್ತ ಗ್ರಂಥಗಳು ಸಿದ್ಧವಾಗಿವೆ. ಇಂದಿನವರೆಗೆ ಎಲ್ಲ ತಿದ್ದುಪಡಿಗಳನ್ನೊಳಗೊಂಡ ಸಂವಿಧಾನದ ಕನ್ನಡ ಪಾಠವು ಇತ್ತೀಚೆಗೆ ಬಿಡುಗಡೆಯಾಗಿದೆ. ಅನೇಕ ಇಲಾಖಾ ಪಾರಿಭಾಷಕ ಕೋಶಗಳೂ ಸಿದ್ಧವಾಗಿವೆ. ಕಾನೂನು ಪದಕೋಶಗಳು, ಆಡಳಿತ ಶಬ್ದಕೋಶಗಳು ಲಭ್ಯವಿವೆ.

ನಮ್ಮ ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಯಿಂದ ಆಗುವ ಲಾಭಗಳ ಬಗ್ಗೆ ನಾನು ಬೇರೆ ಹೇಳಬೇಕಾಗಿಲ್ಲ. ಸದ್ಯದ ಸ್ಥಿತಿಯಲ್ಲಿ ನಮ್ಮ ನ್ಯಾಯಾಲಯಗಳಿಂದ ಶಿಕ್ಷೆ ನೀಡುವ ತೀರ್ಮಾನಗಳು ಸಹ ಶಿಕ್ಷೆ ಪಡೆಯುವವನಿಗೆ ಅರ್ಥವಾಗದ ಭಾಷೆಯಲ್ಲಿ ನೀಡಲಾಗುತ್ತದೆ. ಆದಕಾರಣ ನಾವೆಲ್ಲ ಜನರ ಅನುಕೂಲಕ್ಕಾಗಿ ಕನ್ನಡವನ್ನು ಆದಷ್ಟು ಬೇಗ ಎಲ್ಲ ಹಂತಗಳಲ್ಲಿ ಬಳಕೆಗೆ ತರಲು ಪ್ರಯತ್ನಿಸಬೇಕು.

ಕಲ್ಯಾಣ ರಾಜ್ಯದಲ್ಲಿ ಸಾಮಾಜಿಕ, ಆರ್ಥಿಕ, ಪ್ರಗತಿಯ ಮುಖ್ಯ ಸಾಧನೆ ಕಾನೂನುಗಳು ಸಾಮಾಜಿಕ ಹೊಂದಾಣಿಕೆ, ಪ್ರಗತಿ ಬದಲಾವಣೆಗಳು ಪ್ರಜಾಪ್ರಭುತ್ವದಲ್ಲಿ ಕಾನೂನು ಮೂಲಕವೇ ಆಗತಕ್ಕದ್ದು ಎಂದಾಗ ಕಾನೂನುಗಳಿಗೆ ಎಂಥ ಮಹತ್ವ ಪಾತ್ರವಿದೆ ಎಂಬುದು ಸುಸ್ಪಷ್ಟ. ಹೀಗಿದ್ದರೂ ನಮ್ಮ ಕಾನೂನುಗಳು ನಾವು ಎಣಿಸಿದಷ್ಟು ತ್ವರಿತವಾಗಿ ಆಗುತ್ತಿಲ್ಲ ಕಾರಣ ಕಾನೂನುಗಳ ಭಾಷೆ ಮತ್ತು ನ್ಯಾಯಾಲಯಗಳ ಆಡಳಿತ ಭಾಷೆ ಸಂಬಂಧಪಟ್ಟ ಪ್ರಾದೇಶಿಕ ಭಾಷೆಯಾಗುವುದು ತೀರ ಅಗತ್ಯ ಅನಿವಾರ್ಯವೂ ಹೌದು.

ಭಾರತ ಸರಕಾರವು ರಾಜ್ಯ ಹಾಗೂ ರಾಜ್ಯ ಸರಕಾರಗಳು ಪ್ರಕಟಿಸುವ ಅಧಿಕೃತವಾದ ಕಾನೂನುಗಳು ಆಂಗ್ಲ ಭಾಷೆಯಲ್ಲಿ ಇವೆ. ಕಾನೂನು ಪ್ರಕಾರ ಕಾನೂನಿನ ಅಜ್ಞಾನ ಕ್ಷಮಾರ್ಹವಲ್ಲ 'Ignorance of law is no excuse' ಇಂಗ್ಲೀಷಿನಲ್ಲಿ ನಾವು ಕಾನೂನು ರಚಿಸಿ ಅವುಗಳನ್ನು ಅನುಷ್ಠಾನಕ್ಕೆ ತಂದರೆ ಅದು ಸರಿಯೇ?

ಭಾಷೆ ವಿಕಾಸ ಹೊಂದಿಲ್ಲ ಎನ್ನುವವರಿಗೆ ನಮ್ಮ ಭಾಷೆಯ ಇತಿಹಾಸದ ಅರಿವಿಲ್ಲ. ಬ್ರಿಟಿಷರು ಬರುವ ಮುಂಚೆ ಕನ್ನಡ ಆಡಳಿತ ಭಾಷೆಯಾಗಿತ್ತು ಎನ್ನುವುದನ್ನು ನಮ್ಮ ಶಾಸನಗಳು ಸಮರ್ಥಿಸುತ್ತವೆ. ನಮ್ಮ ಮೊತ್ತ ಮೊದಲ ಕನ್ನಡ ಬರಹವನ್ನು ಕಾಣುವುದು ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಲ್ಲಿ ೧೮ನೇ ಶತಮಾನದ ಕೊನೆಯವರೆಗೂ ನೂರಾರು ಕನ್ನಡ ಶಾಸನಗಳು ದೊರೆಯುತ್ತವೆ. ಮೊದಲು ಶಾಸನಗಳು ಕೇವಲ ವ್ಯವಹಾರಿಕವಾಗಿದ್ದವು. ಅನಂತರ ಕಾನೂನು ಸಾಹಿತ್ಯವಾಗತೊಡಗಿವೆ. ಆಗಿನ ಕಾಲದ ಆಡಳಿತ ಪದ್ಧತಿಯನ್ನು ಬಳಕೆಯಲ್ಲಿದ್ದ ಆಡಳಿತ ಶಬ್ಧಗಳು, ನಿರೂಪಗಳು ಅಂದಿನ ಕರ್ನಾಟಕದ ಅರಸರು ಕೊಟ್ಟ ಸನದುಗಳು, ತಾಮ್ರ ಪಟಗಳು, ಕನ್ನಡ ಆಡಳಿತ ಭಾಷೆ ಹೇಗಿತ್ತು ಎಂಬುದನ್ನು ಪುಷ್ಟೀಕರಿಸುತ್ತವೆ.

ಕಾನೂನು ಪ್ರತಿಯೊಬ್ಬ ನಾಗರಿಕರಿಗೂ ಒಂದೆ, ಆದರೆ ನಮ್ಮ ದೇಶದ ಪ್ರತಿಯೊಬ್ಬ ಬಹುಸಂಖ್ಯಾತ ಅನಕ್ಷರಸ್ಥ. ಶೋಷಿತ ಜನಸಮುದಾಯ ತಮಗೆ ನ್ಯಾಯಯುತವಾಗಿ ಲಭಿಸಬೇಕಾದ ಕಾನೂನು ಸೌಲಭ್ಯಗಳಿಂದ, ನ್ಯಾಯದಾನದಿಂದ ವಂಚಿತರಾಗಿದ್ದಾರೆ. ಈ ಜನಸಮುದಾಯಕ್ಕೆ ಸಮೂಹ ಮಾಧ್ಯಮಗಳ ಮೂಲಕ ಕಾನೂನು ತಿಳುವಳಿಕೆ ಮಾಡಿಸುವ ಪ್ರಯತ್ನ ಹೆಚ್ಚಿನ ರೀತಿಯಲ್ಲಿ ಆಗಬೇಕಾಗಿದೆ. ನಮ್ಮ ದೇಶದ ಪ್ರತಿಯೊಬ್ಬ ನಾಗರೀಕ ತನ್ನ ದೈನಂದಿನ ಬದುಕಿಗೆ ಸಂಬಂಧಿಸಿದಂತೆ ಸಿಗಬೇಕಾದ ಸೌಲಭ್ಯಗಳ ಬಗ್ಗೆ, ಲಭ್ಯವಿರುವ ಕಾನೂನು ನೆರವಿನ ಬಗ್ಗೆ, ಅರಿವನ್ನು ಪಡೆದರೆ ದೇಶದಲ್ಲಿ ಇಂದು ನಡೆಯುತ್ತಿರುವ ಶೋಷಣೆಗೆ ಅಲ್ಪಮಟ್ಟಿಗೆ ಕಡಿವಾಣ ಹಾಕಬಹುದು.

'ಶ್ರೀ ಸಾಮಾನ್ಯರಿಗಾಗಿ ಕಾನೂನು' ಎನ್ನುವುದು ಇಂದಿನ ಬಹಳ ಮಹತ್ವದ ಧ್ಯೇಯ ವಾಕ್ಯ. ಭಾರತದ ಸಂವಿಧಾನವಾಗಲಿ ನಮ್ಮ ದೇಶದ ಜನರ ಒಳಿತಿಗಾಗಿ ರಚಿಸಿರುವ ಕಾನೂನುಗಳಾಗಲಿ ಬಹುತೇಕ ಇಂಗ್ಲೀಷ್ ಭಾಷೆಯಲ್ಲಿದ್ದು ಸಾಮಾನ್ಯರ ಅರಿವಿನ ಅಂಚಿನಿಂದ ದೂರವೇ ಉಳಿದಿದೆ.

ಜನಸಾಮಾನ್ಯರಿಗೆ ಕನ್ನಡದಲ್ಲಿ ಕಾನೂನು ಮುಟ್ಟಿಸುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿರುವ ಅನೇಕರಲ್ಲಿ ಧಾರವಾಡದ ಜಾಗೃತ ಸಂಸ್ಥೆಯು ಬಹು ಪ್ರಮುಖ ಪಾತ್ರ ವಹಿಸಿದೆ. ಇದರ ಸಂಪಾದಕರಾದ ಹಿರಿಯ ನ್ಯಾಯವಾದಿ ಶ್ರೀ ವೆಂಕಟೇಶ ಕುಲಕರ್ಣಿಯವರು ಸ್ವತಃ ಲೇಖಕರು ಅಲ್ಲದೇ ಅನೇಕ ಹಿರಿ-ಕಿರಿಯ ನ್ಯಾಯವಾದಿಗಳಿಂದ ಕಾನೂನು ಕೃತಿಗಳನ್ನು ಹೊರತರಲು ಕಾರಣೀಭೂತರಾಗಿದ್ದಾರೆ. ಈ ಸಂಸ್ಥೆಯಿಂದ ಕನ್ನಡದಲ್ಲಿ ಕಾನೂನು ಸಾಹಿತ್ಯ ವಿಪುಲವಾಗಿ ಹೊರಬಂದಿರುವುದನ್ನು ಗಮನಿಸಬಹುದು. ನಾನೂ ಸಹ ಕನ್ನಡದಲ್ಲಿ **'ಕಾನೂನು ಪುಸ್ತಕಗಳು'** ಎಂಬ ಕೃತಿಯನ್ನು ೧೯೭೮ರಲ್ಲಿಯೇ ಅವರ ಪ್ರಕಾಶನದಲ್ಲಿ ಹೊರತಂದಿರುವೆನು. ಆ ಕಾಲಕ್ಕೆ ವಿವಿಧ ಲೇಖಕರ ೯೫ ಕಾನೂನು ಗ್ರಂಥಗಳು ಎಂದು ಪಟ್ಟಿ ಮಾಡಿದ್ದೇನೆ. ನಂತರದಲ್ಲಿ ಕೇಂದ್ರ ಸರಕಾರದ ಕನ್ನಡ ಕಾನೂನು ಪುಸ್ತಕಗಳು ೧೭ ಹಾಗೂ ರಾಜ್ಯ ಸರಕಾರದ ಕನ್ನಡ ಕಾನೂನು ಪುಸ್ತಕಗಳು ೨೬ ಅದೇ ರೀತಿ ಕಾನೂನಿಗೆ ಸಂಬಂಧಪಟ್ಟ ಇತರೆ ಪುಸ್ತಕಗಳು ೬, ಅಲ್ಲದೇ ಮುಂಬಯಿ ಸರಕಾರದ ಕನ್ನಡ ಕಾನೂನು ಪುಸ್ತಕಗಳು ೧೦ ಈ ರೀತಿ ಕಾನೂನು ಪುಸ್ತಕಗಳ ಗ್ರಂಥ ಸೂಚಿಯನ್ನು ೧೯೭೮ರಲ್ಲಿಯೇ ನೀಡಿದ್ದು ಈಗ ಅಂದಾಜು ೫೦೦ಕ್ಕಿಂತ ಹೆಚ್ಚು ಕನ್ನಡ ಕಾನೂನು ಪುಸ್ತಕಗಳು ವಿವಿಧ ಲೇಖಕರಿಂದ ಹೊರಬಂದಿರುವುದನ್ನು ಗಮನಿಸಬಹುದು.

ಕೇಂದ್ರ ಕಾಯಿದೆಗಳಲ್ಲಿ ೫೨ ವರ್ಷಗಳ ಹಿಂದೆಯೇ ೩೩ ಕಾಯಿದೆಗಳು ಕನ್ನಡದಲ್ಲಿ ಅಧಿಕೃತವಾಗಿ ಭಾಷಾಂತರಿಸಲ್ಪಟ್ಟಿವೆ ಎಂದು ಆಗಿನ ಕಾಯ್ದೆ ಶಾಖೆಯ ಮಂತ್ರಿಗಳಾದ ಶ್ರೀ ಪಾಟಸಕರು ಲೋಕಸಭೆಯಲ್ಲಿ ಹೇಳಿಕೆ ನೀಡಿದ್ದನ್ನು ಗಮನಿಸಬಹುದು. ೧೮-೧೨-೧೯೭೮ರಲ್ಲಿ ರಾಜ್ಯಮಟ್ಟದ ವಿಚಾರ ಸಂಕೀರ್ಣವನ್ನು ಬೆಂಗಳೂರಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ಆ ದಿನ ಕರ್ನಾಟಕದ ರಾಜ್ಯದ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಡಿ.ಎಂ. ಚಂದ್ರಶೇಖರವರು ಹಾಗೂ ಸುಪ್ರೀಮ್ ಕೋರ್ಟಿನ ಮುಖ್ಯ ನ್ಯಾಯಮೂರ್ತಿ ಶ್ರೀ ಚಂದ್ರಚೂಡ ಸಾಹೇಬರು ಹಾಜರಿದ್ದು, ಕನ್ನಡ ಕಾನೂನು ಪುಸ್ತಕಗಳ ಪ್ರದರ್ಶನವನ್ನು ಉದ್ಘಾಟಿಸಿದರು ಎನ್ನುವುದು ಈಗ ಇತಿಹಾಸ.

ಸಮಾಜ ಇಂದು ಹಲವು ಸಂಕೀರ್ಣಗಳನ್ನು ಎದುರಿಸುತ್ತಲಿದೆ. ಬಹಳ ದಿನಗಳ ಹಿಂದೆಯೇ ಗಾಂಧೀಜಿ ಗುರ್ತಿಸಿದ 'ನೀತಿ ರಹಿತ ವಾಣಿಜ್ಯ' 'ತತ್ವರಹಿತ ರಾಜಕಾರಣ' 'ಶ್ರದ್ಧಾ ರಹಿತ ಆರಾಧನೆ' 'ಚಾರಿತ್ರ್ಯ ರಹಿತ ಶಿಕ್ಷಣ' ಮುಂತಾದ ಅನಿಷ್ಟಗಳು ಇಂದು ಇನ್ನಷ್ಟು ವಿಕೃತ ಸ್ವರೂಪ ತಾಳಿವೆ. ಇಂತಹ ಸಂದರ್ಭದಲ್ಲಿ ಕಾನೂನು ಮೂಲಕ ಶಾಂತಿ ಹಾಗೂ ಪ್ರಗತಿ ಮಾರ್ಗೋಪಾಯವಾಗಬಲ್ಲದು.

**ಸಲಹೆಗಳು :**

ಕನ್ನಡ ಕಾನೂನು ಲೇಖಕರ ಸಮ್ಮೇಳನವನ್ನು ದಿನಾಂಕ ೯-೯-೧೯೭೯ರಂದು ಧಾರವಾಡದ ಪ್ರಪ್ರಥಮ ಅಧಿವೇಶನ ಜಾಗೃತ ಭಾರತ ಏರ್ಪಡಿಸಿತ್ತು. ಈಗ ೨೮ ವರ್ಷಗಳ ನಂತರ ನೂರಾರು ಕನ್ನಡ ಕಾನೂನು ಲೇಖಕರು ಅನೇಕ ಕಾನೂನು ಪುಸ್ತಕಗಳನ್ನು ಹೊರತಂದಿದ್ದಾರೆ. ಇತ್ತೀಚೆಗೆ ಸರ್ವಶ್ರೀ ಬೆ.ಕಾ. ಮೂರ್ತೀಶ್ವರಯ್ಯ, ಸರ್ವಶ್ರೀ ಈ.ಸಿ.ಎಚ್. ಗೌಡ ಮತ್ತು ರಮೇಶ, ಎನ್. ಚಂದ್ರಶೇಖರಯ್ಯ, ಬಿ. ಸುಧೀಂದ್ರ ಮೂರ್ತಿ ಹಾಗೂ ನಾಗರಾಜ ಸುಧೀಂದ್ರ ಮೂರ್ತಿ ವಕೀಲರು. ಅಲ್ಲದೇ ಮಹಿಳಾ ವಕೀಲರು ಸಹ ಕಾನೂನು ಸಾಹಿತ್ಯ ರಚನೆಯಲ್ಲಿ ತೊಡಗಿರುವುದನ್ನು ಗಮನಿಸಬಹುದು. ಕನ್ನಡ ವಿಶ್ವವಿದ್ಯಾಲಯದ ಹಂಪಿ ಪ್ರಸಾರಾಂಗ ವಿಭಾಗ ದವರು ಸಹ ಬೇರೆ ಬೇರೆ ಕಾನೂನು ಪುಸ್ತಕಗಳನ್ನು ಹೊರತಂದಿರುವರು. ಭಾರತ ಸಂವಿಧಾನ ಸಹ ಕನ್ನಡದಲ್ಲಿ ಲಭ್ಯವಿದೆ. ಒಟ್ಟಿನಲ್ಲಿ ಕಾನೂನು ಸಾಹಿತ್ಯ ವಿಪುಲವಾಗಿ ಹಾಗೂ ಫಲಪ್ರದವಾಗಿ ಹೊರಹೊಮ್ಮಿದೆ. ಆದ್ದರಿಂದ ಆದಷ್ಟು ಬೇಗನೆ ದ್ವಿತೀಯ ಕಾನೂನು ಲೇಖಕರ ಸಮ್ಮೇಳನ ಜರುಗ ಬೇಕೆಂದು ನಾನು ಅಪೇಕ್ಷಿಸುತ್ತೇನೆ.

ಕನ್ನಡ ಕಾನೂನು ಪುಸ್ತಕಗಳು ಅಲ್ಪಬೆಲೆಗೆ ಜನ ಸಾಮಾನ್ಯರಿಗೆ ತಲುಪಬೇಕು. ನ್ಯಾಯಾಲಯಗಳ ವಿಧಿ ವಿಧಾನಗಳು ಅವರಿಗೆ ಗೊತ್ತಾಗಬೇಕು ಅಂಥ ಚಿಕ್ಕ ಪುಸ್ತಕಗಳು ಇನ್ನೂ ಹೆಚ್ಚು ಹೆಚ್ಚಾಗಿ ಪ್ರಕಟಗೊಳ್ಳಬೇಕು. ಜನರಿಗೆ ಬೇಗನೆ ಲಭ್ಯವಾಗುವಂತಿರಬೇಕು. ಪತ್ರಿಕೆಗಳಲ್ಲಿ ಈ ಕುರಿತು ವಿಮರ್ಶೆಗಳು ಸಹಾ ಮೇಲಿಂದ ಮೇಲೆ ಪ್ರಕಟಗೊಳ್ಳಬೇಕು.

ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರದವರು ಪ್ರಕಟಿಸಿದ ೧೦ ರೂ. ಬೆಲೆಯ ಜನಸಾಮಾನ್ಯರಿಗೆ ಕಾನೂನು, ೩ ರೂ. ಬೆಲೆಯ ಚಿಕ್ಕ ಕಾನೂನು ಪುಸ್ತಕಗಳು ಬಹಳ ಜನಪ್ರಿಯಗೊಂಡಿವೆ. ಅವು ಎಲ್ಲ ಜನರಿಗೂ ದೊರಕು ವಂತಾಗಬೇಕು.

ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರವು 'ಸಾಕ್ಷರ ರಥ' ಎಂಬ ಯೋಜನೆ ಜಾರಿ ತರುವ ಉದ್ದೇಶ ಹೊಂದಿದ್ದು ಅದು ಬೇಗನೆ ಜಾರಿಯಾಗಲಿ. ಸಾಕ್ಷರ ರಥಾ ಯೋಜನೆಯಿಂದ ಶೋಷಿತರು ಹಾಗೂ ಬಡವರ ಬಾಗಿಲಿಗೆ ನ್ಯಾಯ ದೊರಕುವ ಕಾಲ ದೂರವಿಲ್ಲ ಎನ್ನಬಹುದು. ಪ್ರಾಧಿಕಾರದ ಈ ಜವಾಬ್ದಾರಿ ಮಹತ್ವದ್ದು ಹಾಗೂ ಬೇಗನೆ ಸಫಲಗೊಳ್ಳಲಿ ಎಂದು ಹಾರೈಸುವೆ.





# ಶರಣರ ಕಾಯಕ-ಕಲ್ಪ

**-ಶ್ರೀಮತಿ ಸುಮಿತ್ರಾ ದುಂ. ಕುಂಬಾರ, ಚೆಂಚಣಿ ಮತ್ತು ಅಂಚೆ, ಚಿಕ್ಕೋಡಿ ತಾ॥, ಬೆಳಗಾವಿ ಜಿಲ್ಲೆ.**

ಸಮಾಜದ ಪ್ರಗತಿ ಆಗಬೇಕಾದಲ್ಲಿ ಸಮಾಜ ಸ್ವಾವಲಂಬಿಯಾಗಬೇಕು. ಸಮಾಜ ಸ್ವಾವಲಂಬಿಯಾಗಬೇಕಾದರೆ ವ್ಯಕ್ತಿ ಸ್ವಾವಲಂಬಿಯಾಗಬೇಕು. ವ್ಯಕ್ತಿಯ ಉನ್ನತಿ ಹಾಗೂ ಸಮಾಜದ ಪ್ರಗತಿ ಇವೆರಡನ್ನೂ ಒಂದೇ ಕಾಲಕ್ಕೆ ಸಾಧಿಸುವ ಸಾಧನೆಯನ್ನು ಹನ್ನೆರಡನೆ ಶತಮಾನದಲ್ಲಿ ಜಗಜ್ಯೋತಿ ಬಸವಣ್ಣನವರು ಕೈಕೊಂಡಿದ್ದರು. ಅದುವೇ 'ಕಾಯಕತತ್ವ'. ಕಾಯಕ ಎಂದರೆ ಕರ್ಮವಲ್ಲ. ಕರ್ಮವನ್ನು ಆಂಗ್ಲಭಾಷೆಯಲ್ಲಿ Labour ಎಂದು ಕರೆಯುವರು. ದೈಹಿಕವೇ ಆಗಲಿ ಮಾನಸಿಕವೇ ಆಗಲಿ ಗೈದ ಶ್ರಮದಿಂದ ಪ್ರತಿಫಲ ದೊರೆಯಬೇಕು. ಆಗ ಅದು ಕರ್ಮ ಎನಿಸುವುದು. ಕರ್ಮದಲ್ಲಿ ಸ್ವಾರ್ಥವಿದೆ. ಬೇಡಿಕೆ ಇದೆ. ಆದರೆ ಶರಣರು ಈ ಕರ್ಮವನ್ನು ಕಾಯಕವನ್ನಾಗಿ ಪರಿವರ್ತಿಸಿದರು. ಕರ್ಮವು ಪಾಪಪುಣ್ಯಗಳ ಲೇಪವನ್ನು ಹೊಂದಿದೆ. ಆದರೆ ಕಾಯಕ-ನಿರ್ಲೇಪವಾಗಿದೆ. ಯಾವನು ಪರಾವಲಂಬಿಯಾಗದೆ ನಿಸ್ವಾರ್ಥತೆಯಿಂದ ಕರ್ಮಗೈಯುವನೋ ಅದುವೇ 'ಕಾಯಕ'ವಾಗುವುದು.

ಕಾಯಕದಲ್ಲಿ ಮೇಲು-ಕೀಳುಗಳಿಲ್ಲ. ವಿಭಿನ್ನ ಭೇದ ಭಾವವಿಲ್ಲ. ಎಲ್ಲ ವೃತ್ತಿಗಳೂ ಭಾವಶುದ್ಧಿಯಿಂದ ಕಾಯಕ ಎನಿಸುವುದು.

*ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ*
*ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರವನಾದ'*

ಇಲ್ಲಿ ಅವರವರ ವೃತ್ತಿಗಳು ಕಾಯಕವಾಗಿ ಮಾರ್ಪಟ್ಟಿವೆ. ರಾಜ-ರಂಗ ಎಲ್ಲರೂ ಸಮಾನರೆಂದ ಮೇಲೆ ಸಮಾಜದಲ್ಲಿಯ ವೈಪರೀತ್ಯ ದೂರಾಗುವುದು. ಎಲ್ಲರೂ ಕಡ್ಡಾಯವಾಗಿ ಕಾಯಕ ಮಾಡಿಯೇ ಬದುಕಬೇಕು. ಈ ತತ್ವವನ್ನು ಅನುಸರಿಸಿದರೆ ಈ ಹೊತ್ತು ತಲೆ ಎತ್ತಿ ನಿಂತಿರುವ ನಿರುದ್ಯೋಗ ಸಮಸ್ಯೆ ಕಡಿಮೆಯಾದೀತು. ಅದೂ ಅಲ್ಲದೆ ಕಾಯಕವನ್ನು ಕಡೆಗಣಿಸಿ-ಪ್ರಭಾವಿ ವ್ಯಕ್ತಿಯನ್ನಾಗಿ ಹರ ಸಾಹಸ ಮಾಡಿ ಹೊಂದುವ ಡಾಕ್ಟರ್-ಇಂಜಿನಿಯರ್ ಹುದ್ದೆಗಳು ಇಂದಿನ ಸಮಾಜದ ಸಮತೋಲನವನ್ನು ಕಲುಕಿ- ಕಲುಷಿತಗೊಳಿಸಿವೆ. ಅಲ್ಲದೆ ಯುವ ಜನಾಂಗದ ಆತ್ಮಹತ್ಯೆಗೂ ನಾಂದಿಯಾಗಿವೆ. ಎಲ್ಲಿಯವರೆಗೆ ಬಾಲಕರು ತಮ್ಮ ಜವಾಬ್ದಾರಿ ಅರಿತು ಡಾಕ್ಟರ್-ಉಪಾಧ್ಯಾಯ ಇಂಜಿನಿಯರ್-ಕೃಷಿಕರನ್ನು ಭಿನ್ನವಿಲ್ಲದೆ ಪರಿಗಣಿಸಿ, ಲಂಚ ಕೊಡ ಕೊಳ್ಳುವ ಆವಾಂತರವನ್ನು ನಿಲ್ಲಿಸುವುದಿಲ್ಲವೋ ಅಲ್ಲಿಯವರೆಗೆ ಈ ಭಾದೆ ತಪ್ಪಿದಲ್ಲ.

ಅದೂ ಅಲ್ಲದೆ ಕಾಯಕದಲ್ಲಿ ಹೆಚ್ಚಿನ ಪ್ರತಿಫಲಾಕ್ಷೆ ಇಲ್ಲ ನಿತ್ಯ ದುಡಿತ. ಅದಕ್ಕೆ ತಕ್ಕ ಪ್ರತಿಫಲ. ಕೂಡಿಡುವಿಕೆ-ಇನ್ನೊಬ್ಬರ ಬಡತನಕ್ಕೆ ನಾಂದಿಯಾಗಿದೆ. ಇದು ಕಾಯಕ-ತತ್ವದ ಹೊರಗಾದುದು.

*'ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ'*

ಎಂದಿರುವ ಜ್ಞಾನಿ ಅಷ್ಟೇ ಏಕೆ ಪ್ರಧಾನಿಯಾಗಿರುವ ಬಸವಣ್ಣನವರಿಗೆ ಇಂಥ ಅಗಾಧ ಮನೋಬಲ ಬರುವುದು ಸಹಜವಾಗಿದೆ. ಆದರೆ ಅವರಿಗಿಂತಲೂ ಹೆಚ್ಚಿನ ಆತ್ಮಬಲವನ್ನು (Self cinfidence) ಯಕಶ್ಚಿತ್ ಹುಲ್ಲು ಮಾರುವ ಕಾಯಕ ಮಾಡುತ್ತಿದ್ದ ಲದ್ದೆಯ ಸೋಮಣ್ಣನಲ್ಲಿ ನೋಡುತ್ತೇವೆ.

*'ಆವ ಕಾಯಕವಾದರೂ ಸ್ವಕಾಯಕವ ಮಾಡಿ,*
*ಗುರು-ಲಿಂಗ-ಜಂಗಮದ ಮುಂದಿಟ್ಟು*
*ಒಕ್ಕುದು ಹಾರೈಸಿ, ಮಿಕ್ಕುದ ಕೈಕೊಂಡು*
*ವ್ಯಾಧಿ ಬಂದರೆ ನರಳು, ಬೇನೆ ಬಂದರೆ ಒರಲು*
*ಜೀವ ಹೋದರೆ ಸಾಯಿ, ಇದಕ್ಕಾ ದೇವರ ಹಂಗೇಕೆ?'*

ಸಾಮಾನ್ಯ ಗಳಿಕೆಯ ಕಾಯಕ ಜೀವಿ. ಸಂಸಾರದ ತಾಪತ್ರಯ ಹಾಗೂ ಕಷ್ಟ ಕೋಟಲೆಗಳ ನಡುವೆಯೂ ಮಿಂಚುವ ಮನೋಬಲ ದೇವನ ಹಂಗನ್ನೇ ಕಿತ್ತೆಸೆದು ಕಾಯಕವನ್ನು ಅಪ್ಪಿದ ಅವಿನಾಭಾವ ಬೆಸುಗೆ ಬೆರಳು ಕಚ್ಚುವಂತಿದೆ.

ಆದುದರಿಂದಲೇ ಬಸವಣ್ಣನವರು ಕಾಯವೇ ಕೈಲಾಸ ಎಂದಿದ್ದಾರೆ ವಿನಹ ಕಾಯಕದಿಂದ ಕೈಲಾಸವೆಂದಿಲ್ಲ. ಕಾಯಕ ಮಾಡದೇ ಕೆಲಸಕ್ಕೆ ಕೂಲಿ ಅಲ್ಲ. ಅದುವೇ ಕೈಲಾಸ. ಕಾಯಕ ಬಿಟ್ಟು ಬೇರೆ ಕೈಲಾಸವಿಲ್ಲ. ಅದು

ಕೈಲಾಸಕ್ಕೆ ಸಾಧನವಲ್ಲ. ಸಾಧ್ಯವಾಗಿದೆ. ಕಾಯಕ-ವರ್ಗ-ವರ್ಣ-ಮೇಲು-ಕೀಳು-ಜಾತಿ-ಮತ-ಪಂಥ-ಲಿಂಗ-ಬಡವ-ಬಲ್ಲಿದ ಇವೆಲ್ಲವುಗಳಿಂದ ದೂರವಾಗಿದೆ ಎಂಬುದು.

'ಶೆಟ್ಟಿ ಎಂಬನೆ ಶಿರಿಯಾಳನ
ಡೋಹರನೆಂಬನೆ ಕಕ್ಕಯ್ಯನ' ಎನ್ನುವ ಅಣ್ಣನವರ ಉಕ್ತಿಯಲ್ಲಿ ವ್ಯಕ್ತವಾಗಿದೆ. ಸತ್ಯ-ಶುದ್ಧ ಕಾಯಕದಲ್ಲಿ ನಿರತರಾದವರೆಲ್ಲರನ್ನು

*'ಅಂತೇನು ನಮ್ಮ ಡೋಹರ ಕಕ್ಕಯ್ಯ*
*ಬೊಮ್ಮೇನು ನಮ್ಮ ಮಾದಾರ ಚನ್ನಯ್ಯ*
*ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ'*

ವಿಧ ವಿಧ ಕಾಯಕದಲ್ಲಿ ತೊಡಗಿದ ಬಂಧುಗಳು ಎಂದು ಒಪ್ಪಿಕೊಂಡು-

'ಇವನಮ್ಮವ, ಇವನಮ್ಮವ, ಇವ ನಮ್ಮವ' ಎಂದು ತ್ರಿರುಕ್ತಿಯಲ್ಲಿ ಸಂಶಯವನ್ನು ತೊಡೆದುಹಾಕಿ ದೃಢಪಡಿಸಿದ್ದಾನೆ.

ಈ ಕಾಯಕತ್ವದ ಕಠೋರತೆ- ತನ್ಮಯತನವನ್ನು ಕಳೆದು ಕೊಂಡು ಎಲ್ಲಿಯೂ ಶಿಥಿಲಗೊಂಡಿಲ್ಲ. ಯಾವ ಸಿಪಾರಸ್ಸು ಒತ್ತಡಗಳಿಗೆ ಒಳಗಾಗಿಲ್ಲ. ಕಾಯಕವನ್ನು ಹೊರತುಪಡಿಸಿದರೆ ಏನೂ ಇಲ್ಲ. ತನ್ನ ಉದ್ಧಾರದೊಂದಿಗೆ ಸಾಮಾಜಿಕ ಸಮತೋಲನ ಕಾಯ್ದುಕೊಳ್ಳಲು ಅನುವು ಮಾಡಿ ಕೊಡುವುದು. ಅದು ಹೇಗೆಂದರೆ

*ಗುರುವಾದರೂ ಕರ್ಮದಿಂದಲೇ ಜೀವನ್ಮುಕ್ತಿ*
*ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು*
*ಜಂಗಮವಾದರೂ ಕಾಯಕದಿಂದಲೇ ತನ್ನ ವೇಷದ ಪಾಶ ಹರಿವದು'*

ಎನ್ನುವ ನುಲಿಯ ಚಂದಯ್ಯನವರ ನುಡಿಯಲ್ಲಿ ಕರ್ಮ ಖಂಡನೆ ವ್ಯಕ್ತವಾಗುತ್ತದೆ. ಆಯ್ದಕ್ಕಿ ಮಾರಯ್ಯನವರು ಇನ್ನೂ ಒಂದು ಹೆಜ್ಜೆ ಮುಂದಿಟ್ಟು 'ಕಾಯಕದಲ್ಲಿ ನಿರತನಾದೊಡೆ ಗುರುದರ್ಶನ-ಲಿಂಗಪೂಜೆ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯಬೇಕು ಎಂದು ಕಾಯಕದ ಪರಿಕಲ್ಪನೆಯನ್ನು ಮೆರೆದಿದ್ದಾರೆ. ಹೀಗಿದ್ದಾಗ ಕಾಯಕವು ಕೈಲಾಸವಾಗಿ ಪರಿವರ್ತನೆಗೊಂಡು ಶಾಂತಿ-ನೆಮ್ಮದಿಯ ಗೂಡಾಗುವುದು.

ಇನ್ನು ಆಯ್ದಕ್ಕಿ ಮಾರಯ್ಯನವರ ಪುಣ್ಯ ಪತ್ನಿ ಲಕ್ಕಮ್ಮನ ನಿಲುವು ಸಂಗ್ರಹವನ್ನು ವಿಶದಿಸುತ್ತದೆ. ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ತಂದ ತನ್ನ ಗಂಡನನ್ನು 'ಈಸಕ್ಕಿ ಆಸೆ ನಿಮಗೇಕೆ?' ಎಂದು ತಿಳಿಸಿ ಹೇಳುತ್ತಾಳೆ. ಇಲ್ಲಿ ಆರ್ಥಿಕ ಸಮಾನತೆಯ ಆರೋಗ್ಯಕರ ನಿಲುವು ಕಾಣುವುದು. ಇಂದಿನ ನಾರಿಯರು ಬೇಡಿಕೆಗಳ ಸರಮಾಲೆಯನ್ನು ಮುಂದಿಟ್ಟು ಲಂಚಾವತಾರಕ್ಕೆ ಹೆಚ್ಚಿಗೆ ಕುಮ್ಮಕ್ಕು ನೀಡುತ್ತಿದ್ದಾರೆ. ತಮ್ಮ ಹದ್ದು ಮೀರುತ್ತಿರುವ ಬಯಕೆಯ ಹಕ್ಕಿಯ ಹಾರಾಟಕ್ಕೆ ಆರೋಗ್ಯಕರ ದಾರಿ ತೋರಿದರೆ ಮಾತ್ರ ಆರ್ಥಿಕ ಸಮಾನತೆಯ ನಿಲುವು ಸಾಧ್ಯ.

ಗಳಿಕೆಯಲ್ಲಿ ನೀತಿ-ಪ್ರೀತಿ-ಮಿತಿ ಇದ್ದಾಗ ಆದರ್ಶ ಸಮಾಜ ನಿರ್ಮಾಣವಾಗುವುದು. ಸತ್ಯ-ನಿತ್ಯ-ಶುದ್ಧ ದುಡಿಮೆಯನ್ನು ಪ್ರೋತ್ಸಾಹಿಸಿ ಸಂಗ್ರಹ ಪ್ರವೃತ್ತಿಯನ್ನು ಹಾಗೂ ಗಳಿಕೆಯ ವ್ಯಾಮೋಹವನ್ನು ತೊಲಗಿಸಿ ಸಾಮಾಜಿಕ ವಿತರಣಾ ಸಮತೋಲನದಿಂದ ಸುಖೀ ಸಮಾಜ ನಿರ್ಮಿಸಲು ಸಾಧ್ಯವಾಗುವುದು. ದುಡ್ಡಿನ ಮಳೆ ಯಿಂದ ಸಮಾಜ ನಿರ್ಮಾಣ ಸಾಧ್ಯವಿಲ್ಲ. ದುಡಿತದ ಮೇಲೆ ಆದರ್ಶ ಸಮಾಜ ನಿರ್ಮಾಣ ಸಾಧ್ಯ ಎಂದು ಇಡೀ ಜಗತ್ತಿಗೆ ಉತ್ತಮ ಆರ್ಥಿಕ ನೀತಿಯನ್ನು ನೀಡಿದ ಹೆಗ್ಗಳಿಕೆ ಬಸವಾದಿ ಪ್ರಮಥರದು. ನಮ್ಮ ದುಡಿಮೆಯ ಫಲವನ್ನು ನ್ಯಾಯಯುತವಾಗಿ ನಾವೇ ತೂಗಿ ನೋಡಿದಲ್ಲಿ ನಮ್ಮ ಆದಾಯ-ಖರ್ಚು-ಕೂಡುಗಂಟು ಎಲ್ಲವಕ್ಕೂ ಕಣ್ಣು ಹಾಯಿಸುವಲ್ಲಿ ನಮ್ಮ ನಿಜಾಂಶ ತಿಳಿಯಲು ಬೇರೆ ಯಾವ ಲೋಕಾಯುಕ್ತರು ಹೆಣಗಬೇಕಿಲ್ಲ.

ಮನುಜ ಮಾತ್ರರಲ್ಲಿ ಯಾವ ದೇವರ ಹಂಗಿಲ್ಲದೆ ಸತ್ಯ-ಶುದ್ಧ, ಕಾಯಕ ಮಾಡಿ ತನು-ಮನ-ಧನಗಳನ್ನು ಶುದ್ಧವಾಗಿಟ್ಟುಕೊಂಡು, ಸತ್ಪಾತ್ರಕ್ಕೆ ಧನವನ್ನು ವಿನಿಯೋಗಿ ಸುತ್ತ 'ಬೇಡುವವರಿಲ್ಲದೆ ಬಡವ ನಾನಯ್ಯ' ಎಂಬ ಸಂತೃಪ್ತಿಯ ಸದ್ಭಾವನೆಯ ದಾಸೋಹದ ಬದುಕನ್ನು, ಬದುಕಿದ ಶರಣರಿಗೂ- ವಾಮ ಮಾರ್ಗದಿಂದ ಸಂಪತ್ತನ್ನು ಕಲೆಹಾಕಿ 'ನಾಯಿಗಳಿವೆ ಎಚ್ಚರ' ಎಂದು ಮನೆ ಹಾಗೂ ಮನಗಳ ಮುಂದೆ ಬೋರ್ಡ್ ಹಾಕಿಸಿ ಯಾರೂ ಸುಳಿಯದಂತೆ ಗೋಡೆಯ ನಡುವೆ ಬಂಧಿಯಾಗಿ ಯಾವಾಗಲೂ ಅಸಮಧಾನದಿಂದ ಕೊತ-ಕೊತ ಕುದಿಯುತ್ತ ಮನಶಾಂತಿಗೋಸ್ಕರ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಕಂಡ ಕಂಡ (ಇಲ್ಲದ) ದೇವರಿಗೆ ಅಡ್ಡ ಬೀಳುತ್ತಿರುವ ನಾವಿಂದು ಎದ್ದು ನಿಲ್ಲಬೇಕಾದರೆ ಶರಣರ 'ಕಾಯಕ'ದ ಸುತ್ತು ಒಂದು ಸುತ್ತು ಹಾಕುವ ಅವಶ್ಯಕತೆ ಇದೆ.

❀





## ಯಾಂತ್ರಿಕ ಕಲಿಕೆಯಿಂದ ಹೊರಬರುವುದು ಹೇಗೆ ?

-ಹೆಚ್.ಎನ್. ಆನಂದ್, ೪೩, ಎ.ಇ.ಸಿ.ಎಸ್. ಲೇಔಟ್, ೨ನೇ ಫೇಸ್, ೩ನೇ ಮೈನ್, ಸಂಜಯನಗರ, ಬೆಂಗಳೂರು-೯೪.

ಮಕ್ಕಳಿಗೆ ಹಾಕಬಹುದಾದ ಪ್ರಶ್ನೆಗಳು ಮಾಮೂಲಿ ನಂತಿರಬೇಕು. ಆದರೆ ಉತ್ತರಗಳು ವಿಭಿನ್ನವಾಗಿರಲು ಸಾಧ್ಯ.

ಉದಾಹರಣೆಗೆ, 'ಎಲೆ'-ಇದರ ಬಹುವಚನ ಏನು? ಎಂದು ಕೇಳಿದಾಗ ಮಗುವೊಂದು 'ಮರ' ಎಂಬ ವಿಭಿನ್ನ ಉತ್ತರ ನೀಡಿದರೆ ಶಿಕ್ಷಕರು ಹೇಗೆ ಪ್ರತಿಕ್ರಿಯಿಸಬಹುದು? ತಪ್ಪು ಎಂದು ಮಗುವಿಗೆ ಛೀಮಾರಿ ಹಾಕುವುದೆ? ಅಥವಾ ಉತ್ತರ ನೋಡಿ ಬೆರಗಾಗಿ ಮಗುವಿನ ಸೃಜನಶೀಲತೆಗಾಗಿ ಬೆನ್ನು ತಟ್ಟುವುದೆ? ಹಾಗೆಯೇ 'Baby' ಎಂಬ ಬಹುವಚನ ಪ್ರಯೋಗಕ್ಕೆ 'twins' ಎಂಬ ಉತ್ತರ ನೀಡುವ ಮಗುವಿನ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

ಹೀಗೆ, ಇತರನೇಕ ನವೀನ ಉತ್ತರಗಳನ್ನು ಪಡೆಯಲು ಸಾಧ್ಯ. 2+3 ಎಂದರೆ 5 ಸರಿ. ಆದರೆ ಮಗು 2+3=4+1 ಎಂದರೆ ಶಿಕ್ಷಕರು ಏನು ಮಾಡಬೇಕು?

ಈ ಪ್ರಶ್ನೆಯನ್ನು ಗಮನಿಸಿ; 'ಒಂದು ಗೋಡೆಯನ್ನು ಕಟ್ಟಲು ನಾಲ್ಕು ಮಂದಿ ಐದು ದಿನಗಳನ್ನು ತೆಗೆದುಕೊಂಡರೆ ಅದೇ ಗೋಡೆಯನ್ನು ಮೂರೇ ದಿನಗಳಲ್ಲಿ ಕಟ್ಟಲು ಎಷ್ಟು ಮಂದಿ ಬೇಕು? ಇದಕ್ಕೆ ಉತ್ತರ ಹೀಗಿದ್ದರೆ 'ಅದೇ ಗೋಡೆ ಯನ್ನು ಮತ್ತೆ ಏಕೆ ಕಟ್ಟಬೇಕು? ಇದನ್ನು ಅಧಿಕಪ್ರಸಂಗದ ಉತ್ತರ ಎಂದು ಶಿಕ್ಷಕರು ಪರಿಗಣಿಸಬೇಕೆ?

ಎಂತಹ ಉತ್ತರ ಶಿಕ್ಷಕರು ಬಯಸುತ್ತಾರೆ ಎಂಬುದನ್ನು ಇದು ಅವಲಂಬಿಸುತ್ತದೆ. ಮಾಮೂಲಿ ಉತ್ತರವನ್ನು ಬಯಸುವ ಅಥವಾ ನಿರೀಕ್ಷಿಸುವ ಶಿಕ್ಷಕ ಉತ್ತರವನ್ನು ಬಾಯಿಪಾಠ ಮಾಡಿಸಿದ್ದು ಅದನ್ನೇ ಉತ್ತರ ಪತ್ರಿಕೆಯಲ್ಲೂ ಬರೆದರೆ ಸಾಕು ಎಂದು ತೃಪ್ತಿ ಪಡುತ್ತಾನೆ. ಆಗ ಅವನು ಮಕ್ಕಳ ಕಲಿಕಾ ಸಾಮರ್ಥ್ಯವನ್ನು ಪರೀಕ್ಷಿಸಲು ಮುಂದಾ ಗುವುದಿಲ್ಲ. ಅದು ಅವನಿಗೆ ಬೇಕಾಗಿಯೂ ಇಲ್ಲ. ಅವನು ಪರೀಕ್ಷಿಸುವುದು ಮಕ್ಕಳ ನೆನಪಿನ ಶಕ್ತಿ ಮಾತ್ರ. ಉರು ಹೊಡೆದದ್ದನ್ನು ನೆನಪಿಸಿಕೊಂಡು ಬರೆದರೆ ಸಾಕು.

ಆದರೆ ಮಕ್ಕಳ ಕಲಿಕಾ ಸಾಮರ್ಥ್ಯವನ್ನು ಕಟ್ಟಲು ಹೊರಟಿರುವ ಶಿಕ್ಷಕ ಅವರು ವಿಭಿನ್ನ, ಆದರೆ ಸೂಕ್ತ ಉತ್ತರ ಬರೆದರೆ ಅವರನ್ನು ಹುರಿದುಂಬಿಸುತ್ತಾನೆ. ಖ್ಯಾತ ವಿಜ್ಞಾನಿ ಜಯಂತ ವಿಷ್ಣು ನಾರಳೀಕರ್ ವಿದ್ಯಾರ್ಥಿಯಾಗಿದ್ದಾಗ ರೇಖಾ ಗಣಿತದಲ್ಲಿ ಬರುವ ಪೈಥಾಗರಸ್ ಥೀರಂಗೆ ತಮ್ಮದೇ ಆದ ಪುರಾವೆಯನ್ನು ಬರೆದಿದ್ದರು. ಅದು ಸರಿಯಾಗಿತ್ತು. ಆದರೆ ಪಠ್ಯಪುಸ್ತಕದಲ್ಲಿರಲಿಲ್ಲ. ಅದನ್ನು ಗಮನಿಸಿದರೆ ಅವರ ಟೀಚರ್ ಹೊಸ ಉತ್ತರ ಬರೆದಿದ್ದಕ್ಕೆ ನಾರಳೀಕರ್‌ನ್ನು ಅಭಿನಂದಿಸಿದರು. ಆದರೆ ಜೊತೆಜೊತೆಯಲ್ಲೇ 'ಜಯಂತ, ಈ ನಿನ್ನ ಉತ್ತರವನ್ನು ಬೋರ್ಡ್ ಪರೀಕ್ಷೆಯಲ್ಲಿ ಬರೆಯಬೇಡ ಏಕೆಂದರೆ ಮೌಲ್ಯಮಾಪಕ ಅದನ್ನು ಪರಿಗಣಿಸದೇ ಹೋಗಬಹುದು' ಎಂಬ ಎಚ್ಚರಿಕೆಯನ್ನು ನೀಡಿದರು.

ನಮ್ಮ ರಾಷ್ಟ್ರಧ್ವಜದಲ್ಲಿ ಮೂರು ಬಣ್ಣಗಳಿವೆ ಎಂದೂ ಎಲ್ಲರಿಗೂ ತಿಳಿದಿದೆ. ಆದರೆ ಒಮ್ಮೆ ಬಾಲಕಿಯೊಬ್ಬಳು 'ನಾಲ್ಕು ಬಣ್ಣಗಳಿವೆ' ಎಂದು ಉತ್ತರಿಸಿದಾಗ ಅವಳನ್ನು ಪರೀಕ್ಷಿಸುತ್ತಿದ್ದವನಿಗೆ ಆಶ್ಚರ್ಯ. ಮೂರಲ್ಲ, ನಾಲ್ಕು ಎಂದು ಉತ್ತರ ಹೇಳಿದ್ದೇಕೆ? ತಿಳಿಯುವ ಕುತೂಹಲ. ಕೇಸರಿ, ಬಿಳಿ, ಹಸಿರುಗಳ ಜೊತೆಗೆ ಮಧ್ಯದಲ್ಲಿರುವ ಚಕ್ರ ನೀಲಿ ಬಣ್ಣದಲ್ಲಿರುವುದರಿಂದ ಒಟ್ಟು ನಾಲ್ಕು ಬಣ್ಣಗಳಿವೆ. ಎಂಬುದೇ ಆ ಬಾಲಕಿಯ ವಿವರಣೆ! ಅದು ತರ್ಕಬದ್ಧ ಉತ್ತರವಾಗಿತ್ತು. ಶಭಾಷ್! ಎಂದು ಬಾಲಕಿಯ ಬೆನ್ನು ತಟ್ಟಿದಾಗ ಆಕೆ ಕೇಳಿದಳು; 'ಹಾಗಿದ್ದರೆ ಅದನ್ನು ತ್ರಿವರ್ಣ ಧ್ವಜ ಎಂದೇಕೆ ಕರೆಯುತ್ತಾರೆ?'!

ವಿಭಿನ್ನ ಆದರೆ ತಪ್ಪಲ್ಲದ ಉತ್ತರದ ಹಿಂದೆ ಒಂದು ತರ್ಕ ಇರುತ್ತದೆ. ಅದನ್ನು ಗಮನಿಸಿ, ಅದಕ್ಕಾಗಿ ಮಗುವನ್ನು ಅಭಿನಂದಿಸಿದರೆ ಮಗುವಿನ ಸೃಜನಶೀಲತೆಯನ್ನು ಉತ್ತೇಜಿಸದಂತಾಗುತ್ತದೆ. ಆದರೆ ಸಾಮಾನ್ಯವಾಗಿ ಹೀಗಾಗದು. ಟೀಚರ್ ಕಲಿಸಿದ್ದಕ್ಕೇ ಅಥವಾ ಬಾಯಿಪಾಠ ಮಾಡಿಸಿದ್ದಕ್ಕೇ ಅಂಟಿಕೊಳ್ಳಲು ನಾವು ಮಕ್ಕಳಿಗೆ ಸೂಚನೆ ನೀಡುತ್ತೇವೆ.

ನಾನು ಕಾಲೇಜಿನಲ್ಲಿದ್ದಾಗ ನಡೆದ ಘಟನೆ ನೆನಪಿಗೆ ಬರುತ್ತದೆ. ನಾವು 'ಮ್ಯಾಕ್‌ಬೆತ್' ನಾಟಕ ಕಲಿಯಬೇಕಾಗಿತ್ತು. ನನ್ನ ಸಹಪಾಠಿಯೊಬ್ಬ ಇಂಗ್ಲೀಷ್‌ನಲ್ಲಿ ಹಿಂದೆ ಅದಕ್ಕಾಗಿ ಟ್ಯೂಷನ್ ತೆಗೆದುಕೊಳ್ಳುತ್ತಿದ್ದ. ಅವನ ಟ್ಯೂಷನ್ ಟೀಚರ್ ನಾಲ್ಕು ಉತ್ತರಗಳನ್ನು ಬರೆಸಿದ್ದರು. 'ಮ್ಯಾಕ್‌ಬೆತ್' ಎಂಬ ಪದ ಪ್ರಶ್ನೆಯಲ್ಲಿ ಕಂಡರೆ ಉತ್ತರ ಒಂದು 'ಲೇಡಿ ಮ್ಯಾಕ್‌ಬೆತ್' ಎಂದು ಕಂಡರೆ ಉತ್ತರ ಎರಡು 'ಡಂಕನ್' ಕಂಡರೆ ಉತ್ತರ ಮೂರು; 'ದೆವ್ವ' ಕಂಡರೆ ಉತ್ತರ ನಾಲ್ಕು ಬರೆದರೆ ಸಾಕಾಗಿತ್ತು. ನಾಲ್ಕು ಉತ್ತರಗಳನ್ನು ಉರು

ಹೊಡೆದಿದ್ದ. ನನ್ನ ಸಹಪಾಠಿ ಪ್ರಶ್ನೆಪತ್ರಿಕೆಯನ್ನು ಸುಲಭವಾಗಿ ಉತ್ತರಿಸಿದ. ತನ್ನ ಸ್ಮರಣ ಶಕ್ತಿಯಿಂದ, ನನಗಿಂತಲೂ ಹೆಚ್ಚು ಅಂಕಗಳನ್ನು ಪಡೆದ. ಆದರೆ ಈಗಲೂ ಅವನಿಗೆ ಇಂಗ್ಲೀಷ್ ನಲ್ಲಿ ಸರಿಯಾಗಿ ಒಂದು ಪ್ಯಾರಾ ಬರೆಯಲು ಬರುವುದಿಲ್ಲ.

ಉರು ಅಥವಾ ಬಾಯಿಪಾಠ ನಮ್ಮ ಶೈಕ್ಷಣಿಕ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದೆ. ಇದಕ್ಕೆ ನಾವೆಷ್ಟು ಹೊಂದಿಕೊಂಡಿದ್ದೇವೆ ಎಂದರೆ ಒಂದು ಮಾಮೂಲಿ ಪ್ರಶ್ನೆಯನ್ನು ಒಂದಿಷ್ಟು ತಿರುಚಿದರೆ ವಿದ್ಯಾರ್ಥಿಗಳಿಗೆ ಗೊಂದಲವೋ ಗೊಂದಲ. 'ತಾಜ್‌ಮಹಲ್ ಎಲ್ಲಿದೆ?' ಎಂದು ನೇರವಾಗಿ ಕೇಳುವ ಬದಲು 'ನೀವು ತಾಜ್‌ಮಹಲ್ ಮುಂದೆ ನಿಂತಿದ್ದರೆ ಯಾವ ನಗರದಲ್ಲಿರುತ್ತೀರಿ?' ಎಂದು ಮಾರ್ಪಡಿಸಿದರೆ ಪೋಷಕರಿಗೂ ಗೊಂದಲ! ಆದುದರಿಂದಲೇ ನಮ್ಮ ಶಿಕ್ಷಣ ವ್ಯವಸ್ಥೆ ಯಾಂತ್ರಿಕ ಕಲಿಕೆಯನ್ನು ಬೆಂಬಲಿಸುತ್ತಿದೆ. ಹೇಗೆ ಕಲಿಯಬೇಕು ಎಂಬುದನ್ನೇ ನಮ್ಮ ಮಕ್ಕಳಿಗೆ ಕಲಿಸಿದಂತಿಲ್ಲ ಎಂದು ಶಿಕ್ಷಣ ತಜ್ಞರು ಗಂಭೀರವಾಗಿ ಚಿಂತಿಸುತ್ತಿದ್ದಾರೆ. ಮಕ್ಕಳು ಸ್ವತಂತ್ರವಾಗಿ ಯೋಚಿಸುವಂತೆ ಮಾಡುವ ಶಿಕ್ಷಣ ಪದ್ಧತಿಯ ಅಗತ್ಯವನ್ನು ಅವರು ಪ್ರತಿಪಾದಿಸುತ್ತಾರೆ. ಶಿಕ್ಷಣದ ಮೂಲಭೂತ ಉದ್ದೇಶವೇ ಕಲಿಕೆಗೆ ಪ್ರೇರೇಪಣೆ ನೀಡುವಂತಹುದು.

ಆದರೆ ನಾವೆಲ್ಲ Markists ! ಅಂದರೆ ಅಂಕಗಳಿಗೇ ಆದ್ಯತೆ ನೀಡುವವರು. ನಮ್ಮ ಮಕ್ಕಳು ಪಡೆಯುವ ಅಂಕಗಳನ್ನು ಇತರ ಮಕ್ಕಳು ಪಡೆಯುವ ಅಂಕಗಳೊಂದಿಗೆ ಹೋಲಿಸಿ ಇನ್ನೊಬ್ಬ ಮಗು ಒಂದು ಅಂಕ ಹೆಚ್ಚು ಪಡೆದಿದ್ದರೆ ಅವನೇ ಹೆಚ್ಚು ಬುದ್ಧಿವಂತ ಎಂದು ಭಾವಿಸುತ್ತೇವೆ. ಪರೀಕ್ಷೆ ಹೆಚ್ಚು ಅಂಕಗಳನ್ನು ಗಳಿಸುವ, ಒಂದು ಆತಂಕ ತರಿಸುವ ಯುದ್ಧಭೂಮಿಯಾಗಿ ಪರಿವರ್ತನೆಗೊಂಡಿದೆ. ಇದಕ್ಕಾಗಿ ತಯಾರಿ ನಡೆಸಲು ಶಿಕ್ಷಕರು ಶ್ರಮಿಸಿದರೆ ಅವರನ್ನು ದೂಷಿಸುವುದರಿಂದ ಏನೂ ಪ್ರಯೋಜನವಿಲ್ಲ. ಏಕೆಂದರೆ, ವ್ಯವಸ್ಥೆಯೇ ಹಾಗಿದೆ.

ನಾವು ಈಗ ಮೌಲ್ಯಮಾಪನ ಪದ್ಧತಿಯನ್ನೇ ಬದಲಾಯಿಸಬೇಕಿದೆ. ಬಾಯಿಪಾಠ ಮಾಡಿಸಿ ಪರೀಕ್ಷೆಯಲ್ಲಿ ಅದೇ ಉತ್ತರ ಬರೆಯಿಸಿ, ಮಕ್ಕಳ ಸ್ಮರಣ ಶಕ್ತಿಯನ್ನಷ್ಟೇ ಪರೀಕ್ಷಿಸುವ ಪದ್ಧತಿಯಿಂದ ನಾವು ಹೊರ ಬರುವ ನಿರ್ಧಾರ ಕೈಗೊಂಡರೆ ತರಗತಿಯಲ್ಲಿ ಪಾಠ ಮಾಡುವ ರೀತಿ ತನ್ನಷ್ಟಕ್ಕೆ ತಾನೇ ಬದಲಾಗುತ್ತದೆ. ಆಗ ಮಕ್ಕಳ ಕಲಿಕಾ ಸಾಮರ್ಥ್ಯವನ್ನು ಒರೆಗೆ ಹಚ್ಚಿದಂತಾಗುತ್ತದೆ. ಮಕ್ಕಳು ಯಾಂತ್ರಿಕ ಕಲಿಕಾರ್ಥಿಗಳಾಗುವುದಿಲ್ಲ. ಬದಲಿಗೆ, ಪ್ರೇರಣಾರ್ಥಕ ವಿದ್ಯಾರ್ಥಿಗಳಾಗುತ್ತಾರೆ.

ಆದರೆ ಇದನ್ನು ಮಾಡುವರು ಯಾರು? ಎಂದು?

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ. /೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ಮ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ./ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
**'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪.





# ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿ

–ಟಿ.ಆರ್. ಮಹಾದೇವಯ್ಯ, ಗೌರವ ಸಂಪಾದಕರು, ಧರ್ಮಪ್ರಭ ಪತ್ರಿಕೆ,

ಹಳ್ಳಿಯಲ್ಲಿ ಕಣಗಾಲ. ಅಂದರೆ ರೈತರು ತಾವು ಕಷ್ಟಪಟ್ಟು ಹೊಲಗದ್ದೆಗಳಲ್ಲಿ ಬೆಳೆದ ಬೆಳೆಯನ್ನು ಕೊಯ್ದು ಕಣದಲ್ಲಿ ಒಣಗಿಸಿ ಬಡಿದು ಅಥವಾ ದನಕಟ್ಟಿ ತುಳಿಸಿ ಕಾಳು ಕಡ್ಡಿಗಳನ್ನು ಬೇರ್ಪಡಿಸಿ ಧಾನ್ಯವನ್ನು ರಾಶಿ ಮಾಡುವ ಸಂದರ್ಭ. ಗಾಳಿಯಲ್ಲಿ ಹೊಟ್ಟನ್ನು, ಜೊಳ್ಳನ್ನು ತೂರಿ ಧಾನ್ಯವನ್ನು ಬೇರ್ಪಡಿಸುವ ಕೆಲಸ ನಡೆದಿತ್ತು. ಗಾಳಿಗಾಗಿ ಕಾಯುತ್ತಾ ಮೊರಗಳಲ್ಲಿ ಹೊಟ್ಟು ಮಿಶ್ರಿತ ಕಾಳನ್ನು ನಂಬಿ ಗಟ್ಟಿಕಾಳನ್ನು ಸಂಗ್ರಹಿಸಲು ಗಾಳಿ ಬೇಕು. ಗಾಳಿ ಬೀಸತೊಡಗಿತೆಂದರೆ ರೈತರು ಲಗುಬಗೆಯಿಂದ ತೂರ ತೊಡಗುತ್ತಾರೆ. ಗಾಳಿ ಕಮ್ಮಿಯಿದ್ದರೆ ಎತ್ತರವಾದ ಅಟ್ಟಣಿಗೆ ಕಟ್ಟಿ, ಅದರ ಮೇಲೆ ನಿಂತು ತೂರುತ್ತಾರೆ.

ಈ ದೃಶ್ಯ ಕಂಡ ನನಗೆ ಥಟ್ಟನೆ ಶರಣ ಅಂಬಿಗರ ಚೌಡಯ್ಯನ ವಚನವೊಂದನ್ನು ಜ್ಞಾಪಕಕ್ಕೆ ತಂದಿತು:

*ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯ*
*ಗಾಳಿ ನಿಮ್ಮಾಧೀನವಲ್ಲ*
*ನಾಳೆ ತೂರಿಹೆನೆಂದರೆ ಇಲ್ಲಯ್ಯ*
*ಶಿವಶರಣ ಎಂಬುದೊಂದು ಗಾಳಿ ಬಿಟ್ಟಲ್ಲಿ*
*ಬೇಗ ತೂರೆಂದನಂಬಿಗರ ಚೌಡಯ್ಯ*

ಗಾಳಿ ಬೀಸುತ್ತಿರುವಾಗಲೇ ಕಾಳನ್ನು ಸ್ವಚ್ಛಗೊಳಿಸಲು ತೂರಿಕೊಳ್ಳಬೇಕು. ಏಕೆಂದರೆ ಗಾಳಿ ನಮ್ಮ ಅಧೀನದಲ್ಲಿರುವುದಿಲ್ಲ. ಸೋಮಾರಿತನದಿಂದ ನಾಳೆ ತೂರಿದರಾಯಿತು ಎಂದರಾಯಿತು. ಕಾದಿದ್ದು ಗಾಳಿ ಬಂದಾಗ ಇಂದೇ ತೂರುವ ಕೆಲಸ ಮಾಡಿ ಮುಗಿಸಬೇಕು. ರೈತಾಪಿ ಜನರ ವೃತ್ತಿಸಂಬಂಧವಾದ ಲೌಕಿಕ ಪ್ರಸಂಗದಿಂದ ವಚನಕಾರ ಚೌಡಯ್ಯ ಮತ್ತೊಂದು ಅಲೌಕಿಕ ವಿಚಾರದತ್ತ ನಮ್ಮ ಗಮನ ಸೆಳೆಯುತ್ತಾನೆ. ಮಾಡುವ ಮಾಟದಿಂದ (ಅಂದರೆ, ಕೆಲಸದಿಂದ) ಮತ್ತೊಂದನರಿಯಬೇಕು ಎಂದಿರುವ ಅಲ್ಲಮ ಪ್ರಭುದೇವರ ಮಾತು ಇಲ್ಲಿ ಪ್ರಸ್ತುತ.

ಆ ದೇಹದಲ್ಲಿ ಗಾಳಿ, ಅಂದರೆ ಪ್ರಾಣವಾಯು ಆಡುತ್ತಿರುವಾಗಲೇ ನಾವು ನಮ್ಮಲ್ಲಿರುವ ಜೊಳ್ಳನ್ನು, ನಿಸ್ಸಾರ ವಸ್ತುವನ್ನು ಹೊರಹಾಕಿ, ಗಟ್ಟಿಯಾದ ಸತ್ವಪೂರ್ಣವಾದ ಗುಣಗಳನ್ನು, ಮೌಲ್ಯಗಳನ್ನು ಉಳಿಸಿಕೊಳ್ಳಬೇಕು. ನಾಳೆಗೆ ಮಾಡಿದರಾಯಿತು ಎಂದು ಮುಂದಕ್ಕೆ ಹಾಕಿದರೆ ಅಲ್ಲಿಯವರೆಗೆ ಗಾಳಿ ಇರುವುದೆಂದು ಯಾರಿಗೆ ಗೊತ್ತು? ನಾಳೆಯೆಂದರೆ ಹಾಳು. ಯಾವ ಕ್ಷಣದಲ್ಲಿ ದೇಹದೊಳಗೆ ಚಲಿಸುವ ಉಸಿರು ನಿಲ್ಲುವುದೊ ನಮಗೆ ತಿಳಿಯದು.

ಮಹಾತ್ಮರು, ಮಾನವ ಹಿತೈಷಿ ಮಹಾನುಭಾವರು ಆಗೊಮ್ಮೆ ಈಗೊಮ್ಮೆ ಇಲ್ಲಿ ಸುಳಿದಾಡುತ್ತಾರೆ. ಅವರು ಸುಳಿದಾಡುವುದನ್ನು ಅರಿತು ನಮ್ಮ ಮನದ ಸರಕನ್ನು ತೂರಿಕೊಂಡು ಸ್ವಚ್ಛಗೊಳಿಸಿ ಗಟ್ಟಿಯಾದ ಗುಣವೆಂಬ ಕಾಳನ್ನು ಸಂಗ್ರಹಿಸಿಟ್ಟುಕೊಳ್ಳಬೇಕು. ನಾವು ಬಯಸಿದಾಗ ಅವರು ಬರಲಾರರು. ಕಾದಿದ್ದು ಅವರು ಬಂದಾಗಲೇ ನಮ್ಮ ಜನ್ಮದ ಜಂಜಡವನ್ನೆಲ್ಲಾ ತೂರಿಕೊಂಡು ಪಾವನರಾಗುವುದು ನಿಜವಾದ ಜಾಣತನ. ಅವರದು ಮಿಂಚಿನಂಥ ಸಂಚಲನ, ವಿದ್ಯುತ್ತಿನ ವೇಗ! ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡಂತೆ ಆಗಬಾರದು. ಜೀವವೇನು ಶಾಶ್ವತವೇ? ಮೃತ್ಯು ಮುಟ್ಟದ ಮುನ್ನ ತ್ವರೆಯಿಂದ ಮಾಡಬೇಕಾದ್ದನ್ನು ಮಾಡಿ ಮುಗಿಸಿರಿ ಎಂಬ ಬಸವಣ್ಣನ ವಚನ ನೆನಪಾಗುತ್ತದೆ. 'ಹಲ್ಲುಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ, ಕಾಲ ಮೇಲೆ ಕೈಯ್ಯನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು?!' ಸಾವು ಬರುತ್ತಿದೆ. ಅಷ್ಟರೊಳಗೆ ನೀನು ಮಾಡಲೇಬೇಕಾದ ಕೆಲಸವನ್ನು ಆಗುಮಾಡೆಂದು ಅವರು ನೇರವಾಗಿ ಹೇಳಿದ್ದಾರೆ.

ಅಂಬಿಗರ ಚೌಡಯ್ಯ ಹೇಳುವುದೂ ಅದನ್ನೇ. ಶಿವಶರಣರೆಂಬ ಗಾಳಿ ಭಗವಂತನ ಕೃಪಾಶಕ್ತಿಯಂತೆ ಸುಳಿದಾಡುತ್ತಿದೆ. ಆಗ ನಾವು ಸುಮ್ಮನಿರಬಾರದು. ಮನಸ್ಸನ್ನು ತೆರೆದಿಡಬೇಕು. ಆಗ ಜೊಳ್ಳೆಲ್ಲಾ ತೂರಿಹೋಗಿ ಜೀವತಾರಕವಾದ ಸತ್ವಯುತ ಗುಣಗಳು ಉಳಿಯುತ್ತವೆ ಎಂದಿದ್ದಾನೆ. ಚೌಡಯ್ಯನೆಂಬ ಸಾಮಾನ್ಯ ಅಂಬಿಗ, ಆದರೆ ಮಹಾಜ್ಞಾನಿ, ಅನುಭಾವಿ, ಒಂದು ಪರಿಚಿತ ದೃಷ್ಟಾಂತದಿಂದ ನಮಗೆ, ಅಪರಿಚಿತವಾದಂತಹ ಸಂಗತಿಯನ್ನು ಅನಾವರಣಗೊಳಿಸಿದ್ದಾನೆ. ಹೊರಗೆ ಶುದ್ಧರಾಗುವ, ಭಗವತ್ಕೃಪೆಗೆ ಪಾತ್ರರಾಗುವ ಮಾರ್ಗವನ್ನು ತೋರಿದೆ. ವಚನ ಸಾಹಿತ್ಯದ ಉದ್ದೇಶವೇ ಇದು. ಜನ ಬದುಕಲೆಂಬುದು ಅದರ ಆಶಯ. ಬನ್ನಿ, ಗಾಳಿ ಬೀಸುತ್ತಿದೆ. ಅದು ನಿಲ್ಲುವ ಮುಂಚೆಯೇ ತೂರಿಕೊಳ್ಳೋಣ.

## ಆಗಸ್ಟ್ ತಿಂಗಳಲ್ಲಿ ಬರುವ ಮಹತ್ವದ ದಿನಗಳು

-ಶಕುಂತಲಾ ಯು.

**ಆಗಸ್ಟ್ ೩ – ವಿಶ್ವ ಸ್ನೇಹಿತರ ದಿನ :**

ಸ್ನೇಹ ಬದುಕಿನ ಅಮೂಲ್ಯ ನಿಧಿ. ಇಲ್ಲಿ ಹೃದಯವಂತಿಕೆ ಔದಾರ್ಯ ಸಹನೆ, ಪ್ರೀತಿ, ಕ್ಷಮೆ ಸಹಾಯ, ಸಹಕಾರದಂಥ ಅಮೂಲ್ಯ ಮೌಲ್ಯಗಳು ಇರುತ್ತವೆ. ಸ್ನೇಹ ಮಧುರವಾದ ಬಂಧನ. ಎಲ್ಲ ರಂಗಗಳಲ್ಲಿ ಸಂಬಂಧಗಳಲ್ಲಿ ನಮ್ಮನ್ನು ಒಂದು ಮಾಡುವ ಬೆಸೆಯುವ ಬಂಧನ ಸೂತ್ರ. ಇಲ್ಲಿ ಅಧಿಕಾರದ ಅಂತಸ್ತಿನ ಭೇದ-ಭಾವ ಇರಬಾರದು. ಇದು ದೇಶಕಾಲ ಪರಿಸ್ಥಿತಿ ಮೀರಿ ಬೆಳೆಯುವ ಒಂದು ಗುಣಧರ್ಮ. ಸುಖದುಃಖದಲ್ಲಿ ಪಾಲ್ಗೊಳ್ಳುವ ಸಮಾನ ಮನಸ್ಕ ವ್ಯಕ್ತಿಯೇ ನಿಜವಾದ ಸ್ನೇಹಿತ. ಸ್ನೇಹದಲ್ಲಿ ಮುಖ್ಯ ಭಾವ ಸಮಾನತೆ ಸಹೃದಯತೆ ಮತ್ತು ಸಹಜಗುಣ. ರಾಮಾಯಣದಲ್ಲಿ ಶ್ರೀರಾಮನು ಸುಗ್ರೀವನ ಸ್ನೇಹವನ್ನು ಒಂದೇ ರೀತಿಯ ಕಷ್ಟ ಬಂದದ್ದರಿಂದ. ಇದು ಲೌಕಿಕ ಸತ್ಯ. ಸ್ವಾರ್ಥ ಪರ ಚಿಂತನೆ ಸಂಶಯಗಳು ಸ್ನೇಹಕ್ಕೆ ಧಕ್ಕೆ ತರುತ್ತವೆ. ಇಂಥ ಸ್ನೇಹದ ನೆನಪಿಗೆ ವಿಶ್ವಸ್ನೇಹಿತರ ದಿನದ ಆಚರಣೆ. ಇಬ್ಬರು ಆತ್ಮೀಯ ಸ್ನೇಹಿತರ ಸ್ವಭಾವ ಒಂದೇ ರೀತಿ ಇರುವುದಿಲ್ಲ. ಅವರಿಗೆ ತಮ್ಮ ಭಿನ್ನಾಭಿಪ್ರಾಯಗಳನ್ನು ಮೀರಿ ಬೆಳೆಯುವ ಗುಣ ಇರುತ್ತದೆ. ಇದನ್ನು ಎಲ್ಲರೊಂದಿಗೆ ಹಂಚಿಕೊಂಡರೆ ಸ್ನೇಹಿತರನ್ನು ಬೆಳೆಸಿಕೊಳ್ಳಬಹುದು.

**ಆಗಸ್ಟ್ ಮೊದಲ ವಾರ (೧-೭) – ಸ್ತನ್ಯಪಾನ್ಯ ಸಪ್ತಾಹ :**

ತಾಯಿ ಎದೆಹಾಲು ಅಮೃತ. ಪ್ರಕೃತಿ ಮಗುವಿಗೆ ಸಿದ್ಧಪಡಿಸಿ ಕೊಡುವ ಉತ್ಕೃಷ್ಟ ಆಹಾರ. ಮಗು ಹುಟ್ಟಿದ ೪ ರಿಂದ ೬ ತಿಂಗಳವರೆಗೆ ಬೇಕಿರುವ ಉತ್ಕೃಷ್ಟ ಆಹಾರ. ೧ ವರ್ಷದಿಂದ ೨ ವರ್ಷದವರೆಗೆ ಶೇ ೪೦ ರಷ್ಟು ಶಕ್ತಿ ಕೊಡುತ್ತದೆ. ಆದರೆ ಈಗ ತಾಯಿಯ ಅಪೌಷ್ಟಿಕತೆಯಿಂದ ಎದೆ ಹಾಲು ಮಗುವಿಗೆ ಯೋಗ್ಯ ಪ್ರಮಾಣದಲ್ಲಿ ಸಿಗುತ್ತಿಲ್ಲ. ಪ್ರತಿವರ್ಷ ಇಳಿಮುಖವಾಗುತ್ತಿರುವ ಸ್ತನ್ಯಪಾನ ಮಾಡಿಸುವ ತಾಯಂದಿರ ಸಂಖ್ಯೆ ಕಡಿಮೆ ಆಗುತ್ತಿರುವುದರಿಂದ ಮಕ್ಕಳಲ್ಲಿ ರೋಗ ನಿರೋಧಕ ಶಕ್ತಿ ಕಡಿಮೆಯಾಗುತ್ತಿರುವುದನ್ನು ಗಮನಿಸಿ ವಿಶ್ವ ಸ್ತನ್ಯಪಾನ್ಯ ಆಚರಣೆ ಪ್ರಾರಂಭವಾಯಿತು. ವಿಶ್ವ ಆರೋಗ್ಯ ೨೦೦೨ರಲ್ಲಿ ವಿಶ್ವವ್ಯಾಪಿ ಕಾರ್ಯಸೂಚಿ ಆರಂಭಿಸಿತು. ನಮ್ಮ ದೇಶದಲ್ಲಿ ಸ್ತನ್ಯಪಾನ ಪ್ರೋತ್ಸಾಹ ಜಾಲ ಪ್ರಾರಂಭವಾಗಿದ್ದು, ಸ್ತನ್ಯಪಾನ್ಯ ಪ್ರೋತ್ಸಾಹಿಸುವ ದೃಷ್ಟಿಯಿಂದ ಹಲವು ಮಾಧ್ಯಮಗಳಿಂದ ಪ್ರಚಾರ ಮಾಡಲಾಗುತ್ತದೆ. ತಾಯಿ-ಮಗುವಿನ ಸಂಬಂಧ ತಾಯಿಯ ಆರೋಗ್ಯ ಪೌಷ್ಟಿಕ ಆಹಾರ, ಮಗುವಿಗೆ ೬ ತಿಂಗಳ ನಂತರ ಕೊಡುವ ಪೌಷ್ಟಿಕಾಂಶ ಆಹಾರ, ಸ್ತನ್ಯಪಾನ್ಯದ ಮಹತ್ವ ಮುಂತಾದ ವಿಷಯುಗಳ ಬಗ್ಗೆ ಅರಿವು ಮೂಡಿಸುವುದು ಈ ಸಪ್ತಾಹದ ಉದ್ದೇಶ. ಸರಕಾರ ಬಡವರಿಗೆ ಈ ದಿಶೆಯಲ್ಲಿ ಸಹಾಯಕರ ಪ್ರೋತ್ಸಾಹಕರ ಯೋಜನೆಗಳನ್ನು ಕೈಕೊಂಡಿವೆ

**ಆಗಸ್ಟ್ ೯ – ಅಂತರಾಷ್ಟ್ರೀಯ ಆದಿವಾಸಿಗಳ ದಿನಾಚರಣೆ :**

ಮೂಲನಿವಾಸಿಗಳು ವಿಶ್ವದ ಎಲ್ಲೆಡೆ ತೀರಾ ದಯನೀಯ ಸ್ಥಿತಿಯಲ್ಲಿದ್ದಾರೆ. ತಮ್ಮದೇ ಆದ ಸಾಮಾಜಿಕ-ಧಾರ್ಮಿಕ-ಕಂದಾಚಾರಗಳಿಗೆ ಬಲಿಯಾಗಿ ಅನಾಗರಿಕರಾಗಿದ್ದಾರೆ. ಆಸ್ಟ್ರೇಲಿಯಾದ ಮಾವೋರಿಗಳು, ಅಮೇರಿಕಾದ ರೆಡ್ ಇಂಡಿಯನ್‌ರು, ಆಫ್ರಿಕಾದ ಬುಶ್‌ಮೆನ್, ನೀಗ್ರೋಗಳು, ಭಾರತದ ತೋಡರು, ಕೇಲರು, ಗಿರಿಜನರು ಮೂಲ ನಿವಾಸಿಗಳಾಗಿದ್ದು ಆಧುನಿಕತೆಯಿಂದ ವಂಚಿತರಾಗಿದ್ದಾರೆ. ಈ ಆದಿವಾಸಿಗಳ ಬದುಕು ಬದಲಾಗುವ ದೃಷ್ಟಿಯಿಂದ ವಿಶ್ವಸಂಸ್ಥೆ ೨೦೦೩ ಅಂತರಾಷ್ಟ್ರೀಯ ಮೂಲನಿವಾಸಿಗಳ ವರ್ಷ ಎಂದು ಘೋಷಣೆ ಮಾಡಿದ್ದು, ಇದು ಜಾರಿಯಲ್ಲಿ ಇರುತ್ತದೆ. ಭಾರತದಲ್ಲಿ ಮೂರು ಕೋಟಿಗಿಂತ ಹೆಚ್ಚು ಆದಿವಾಸಿಗಳಿದ್ದಾರೆ. ನೀಲಗಿರಿಯ ತೋಡರು, ಮಧ್ಯಪ್ರದೇಶದ ಗೊಂಡರು, ಒರಿಸ್ಸಾದ ಸವೋರ, ಅಸ್ಸಾಂನ ನಾಗಾ ಬುಡಕಟ್ಟು ಜನರು ಪ್ರಮುಖರು. ಅವರ ಸಂಸ್ಕೃತಿ ಪರಂಪರೆ ಉಳಿಸಿ ಅವರನ್ನು ಸಾಕ್ಷರರನ್ನಾಗಿ ಸುಶಿಕ್ಷಿತರನ್ನಾಗಿ ಮಾಡುವುದು ಈ ದಿನದ ಉದ್ದೇಶ.

**ಆಗಸ್ಟ್ ೧೨ – ಅಂತರಾಷ್ಟ್ರೀಯ ಯುವಜನಾಂಗ ದಿನಾಚರಣೆ :**

ವಿಶ್ವಸಂಸ್ಥೆ ಹಿಂದಿನ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನನ್ ೨೦೦೧ ರಲ್ಲಿ ಪ್ರತಿವರ್ಷ ಅಗಸ್ಟ ೧೨ರಂದು ಈ ದಿನಾಚರಣೆ ಮಾಡಲು ಕರೆಯಿತ್ತರು. ಯುವಕರು ಎಚ್.ಐ.ವಿ.ಗೆ ಮತ್ತು ಮಾರಕ ವ್ಯಸನಗಳಿಗೆ ಬಲಿಯಾಗುತ್ತಿರುವುದರಿಂದ ಅವರನ್ನು ತಡೆಗಟ್ಟಲು ಯುವಕರಲ್ಲಿ ಜಾಗೃತಿ ಮೂಡಿಸಲು ಈ ದಿನಾಚರಣೆಯ ಉದ್ದೇಶ. 'ದ್ವೇಷ, ಮೋಸ, ಲೋಭ, ಕಡಿಮೆ ಮಾಡಿ ಮೋಹ, ಕಾಮಕ್ಕೆ ಗುಲಾಮರಾಗದೆ ಬಾಳಿನಲ್ಲಿ ನಂಬಿಕೆ ಇಟ್ಟು ಮುಂದೆ ಸಾಗಿರಿ' ಎಂಬುದು ಈ ದಿನಾಚರಣೆಯ ಸಂದೇಶ.

**ಆಗಸ್ಟ್ ೧೫ – ಸ್ವಾತಂತ್ರ್ಯ ದಿನಾಚರಣೆಯೊಂದಿಗೆ ಮಹರ್ಷಿ ಅರವಿಂದರ ಜನ್ಮದಿನ.**





## ನೀರಿನ ಆಂತರಿಕ ಬಳಕೆ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

**ಕೆಲವು ಪ್ರಶ್ನೆಗಳು :**

ಪ್ರಶ್ನೆ: ಹಾಗಾದರೆ 'ದಿನಕ್ಕೆ ಎಷ್ಟು ಲೋಟ ನೀರು ಕುಡಿಯಬೇಕು?

'ದಿನಕ್ಕೆ ಎಂಟು ಲೋಟ ನೀರು'

ಪ್ರಶ್ನೆ: 'ಯಾವ ಲೋಟ?' ಚಿಕ್ಕದೋ, ದೊಡ್ಡದೋ?

'ಶರೀರವನ್ನು ಹಾಗೆ ತೊಳೆಯಲು ಅದೇನು ಗಟಾರವೇ?' – ಡಾ॥ ಲಿಂಡ್ಲರ್, ಪ್ರಕೃತಿ ಚಿಕಿತ್ಸಾ ತಜ್ಞ.

'Drink as often as you are thirsty never much at a time. When a supply of water in our body's runs low. The voice of nature calls more' then is the time to drink water but donot inundate your stomach with an excessive quantity when there is no necessity'- "ಬಾಯಾರಿಕೆಯಾದಾಗ ಮಾತ್ರ ನೀರು ಕುಡಿಯಿರಿ. ನಮ್ಮ ಶರಿರದಲ್ಲಿ ನೀರಿನ ಅವಶ್ಯಕತೆ ಯಿದ್ದಾಗ ಅದು ಕೇಳುತ್ತದೆ. ಆಗ ನೀರು ಕೊಡುವ ವೇಳೆ. ಅವಶ್ಯಕತೆಯಿಲ್ಲದಾಗ ಶರೀರವನ್ನು ನೀರಿನ ಹೊಳೆಯಿಂದ ಹರಿಸುವುದು ಸಾಧುವಲ್ಲ". J.W. Wilson.

ಪ್ರಶ್ನೆ :ಮುದುಕರಿಗೆ, ಮಕ್ಕಳಿಗೆ, ಮಸಾಲೆದೋಸೆ ತಿಂದವರಿಗೆ, ಮೂಸಂಬಿ ರಸ ಕುಡಿದವರಿಗೆ, ಕಾಫಿ ಕುಡಿದವರಿಗೆ, ಕಟೀ ಬಕರಿ ತಿಂದವರಿಗೆ, ಹಣ್ಣು-ಹಂಪಲು ತಿಂದವರಿಗೆ, ಎಲ್ಲರಿಗೂ ಯೂನಿಫಾರಂ ತೊಡಿಸಿದಂತೆ ಒಂದೇ ಅಳತೆಯ ನೀರೇ?

'ನೀರಡಿಕೆಯಾದಾಗ ಮತ್ತು ತೃಪ್ತಿಯಾಗುವಂತೆ ಮಾತ್ರ ನೀರನ್ನು ಕುಡಿಯಬೇಕೆಂಬುದೇ ಇದಕ್ಕೆ ಸರಳವಾದ ಉತ್ತರ... ವಾಸ್ತವಿಕವಾಗಿ ವಿಚಾರ ಮಾಡಿದರೆ, ನಮಗೆ ನೀರು ಕುಡಿಯುವ ಅವಶ್ಯಕತೆಯು ಬಹುತರವಾಗಿ ಇಲ್ಲ ವೆಂದರೂ ನಡೆದೀತು.... ನಮ್ಮ ಆಹಾರದೊಳಗಿನ ಮೆಣಸಿನಕಾಯಿ, ಮಸಾಲೆ ಮುಂತಾದ ವ್ಯಂಜಕ ಪದಾರ್ಥ ಗಳೇ ಕಾರಣವೆಂದು ಮೇಲಿಂದ ಮೇಲೆ ಅಳತೆಗೆಟ್ಟು ನೀರು ಕುಡಿಯುವ ಜನರಿಗೆ ಒಂದಿಲ್ಲೊಂದು ರೋಗವು ಅಂಟಿಕೊಂಡಿರಲಿಕ್ಕೇ ಬೇಕೆಂಬುದು ಸಿದ್ಧ.'- ಪ್ರಕೃತಿ ಚಿಕಿತ್ಸೆ, ಮಹಾತ್ಮಾ ಗಾಂಧೀಜಿ.

'Your body needs an absolute minimum of Six to eight ounce glass of water a day' - 'ನಿಮ್ಮ ಶರೀರ್ವವು ಕನಿಷ್ಟಪಕ್ಷ 6ರಿಂದ 8 ಲೋಟ ನೀರನ್ನು ಬಯಸುತ್ತದೆ'. 'Your body's many cries for Water-Dr. Batsman.

'To maintain the proper amount of water in your body you should consume atleast Eight glasses of clean liquid each day'- 'ನಿಮ್ಮ ಶರಿರದ ನೀರಿನ ಸಮತೋಲನವನ್ನು ಕಪಾಡಿ ಕೊಳ್ಳಲು ಒಂದು ದಿನಕ್ಕೆ ಕನಿಷ್ಟ 6ರಿಂದ 8 ಲೋಟ ಶುದ್ಧ ನೀರನ್ನು ಕುಡಿಯಬೇಕು'. -Know your body. Reader digest Guide.

ಯಾರ ಮಾತನ್ನು ನಂಬುವುದು? ಗೊಂದಲಕ್ಕೆ ಬೀಳುವ ಬದಲಿ ನೀರನ್ನು ಕುಡಿಯುವ ಹಿಂದಿರುವ ವೈಜ್ಞಾನಿಕತೆಯನ್ನು ಅರ್ಥಮಾಡಿಕೊಂಡು ಅವರವರ ವಯಸ್ಸು, ಋತುಮಾನ, ಶರೀರದ ಆರೋಗ್ಯ, ಅನಾರೋಗ್ಯದ ಸ್ಥಿತಿ ಇವುಗಳನ್ನು ಅನುಸರಿಸಿ ಅವರವರೇ ನಿರ್ಧರಿಸುವುದು ಶರೀರದ ಹುಟ್ಟಿನಿಂದ ಇಪ್ಪತ್ತು ವರ್ಷಗಳ ವರೆವಿಗೂ ಬೆಳವಣಿಗೆ ಜತೆಯಲ್ಲಿಯೇ ಶರೀರದಲ್ಲಿ ನೀರನ್ನು ಉಪಯೋಗಿಸಿಕೊಳ್ಳುವ ಶಕ್ತಿಯು ಹೆಚ್ಚುತ್ತಾ ಹೋಗುತ್ತದೆ. ಸುಮಾರು ಇಪ್ಪತ್ತರಿಂದ ಐವತ್ತು ವರ್ಷಗಳವರೆವಿಗೂ ಒಂದೇ ಸಮನಾಗಿರುತ್ತದೆ. ನಂತರ ವೃದ್ಧಾಪ್ಯದಲ್ಲಿ ಈ ಶಕ್ತಿಯು ಇಳಿಮುಖವಾಗುತ್ತದೆ. ಆಗ ಹೆಚ್ಚು ನೀರು ಕುಡಿದರೂ ಪ್ರಯೋಜನವಿಲ್ಲ. ಆಹಾರ ಬರೀ ತನ್ನ ಕೆಲಸವಾದ ಶಕ್ತಿ, ಬೆಳವಣಿಗೆ, ಮುಂತಾದ ಕ್ರಿಯೆಗಳನ್ನಷ್ಟೇ ನೆರವೇರಿಸುತ್ತದೆ. ಆದರೆ ನೀರು ಆಹಾರವೂ ಹೌದು, ಜೊತೆಗೆ ಶರೀರದ ಒಳಗಿನ, ಹೊರಗಿನ ಕೊಳೆಯನ್ನು ತೊಳೆಯುತ್ತದೆ. ಆದ್ದರಿಂದ ಆಹಾರ ಮುಖ್ಯ, ಆದರೆ ನೀರು ಆಹಾರಕ್ಕಿಂತ ಮುಖ್ಯ.

ಶರೀರ ತನ್ನ ಆಹಾರದ ಅವಶ್ಯಕತೆಯನ್ನು ಹಸಿವಿನ ಚಿನ್ಹೆಯ ಮೂಲಕ ತಿಳಿಸುವುದು. ಹಾಗೆಯೇ ನೀರಿನ ಅವಶ್ಯಕತೆಯನ್ನು ಬಾಯಾರಿಕೆಯ ಮೂಲಕ ತಿಳಿಸುವುದು. ಇವೆರಡನ್ನು ಹಸಿವಿನ ಶಬ್ದ ಹೆಚ್ಚು. ಹಸಿವು ಬಂದಾಗ ಆಹಾರ ಕೊಡದಿದ್ದರೆ ಮತ್ತೆ ಸ್ವಲ್ಪ ಹೊತ್ತು ಬಿಟ್ಟು ಹಸಿವು ಬರುತ್ತದೆ. ಹೀಗೆ ಎರಡು-ಮೂರು ಸಲ ಬಂದು ತನ್ನ ಅವಶ್ಯಕತೆಯನ್ನು ತಿಳಿಸುತ್ತದೆ. ಆಗಲೂ ಕೇಳದಿದ್ದರೆ ಆಗ

ತಾನು ಕೂಡಿಟ್ಟಿದ್ದ ಆಹಾರಕ್ಕೆ ಕೈಹಾಕಿ ತೆಗೆದುಕೊಳ್ಳುತ್ತದೆ. ಆದರೆ ನೀರು ಹಾಗೆ ಮಾಡುವುದಿಲ್ಲ. ತನ್ನ ಅವಶ್ಯಕತೆಯನ್ನು ಒಮ್ಮೆ ಸೂಚ್ಯವಾಗಿ ತಿಳಿಸಿ ತಕ್ಷಣ ಮಾಯವಾಗಿ ಬಿಡುತ್ತದೆ. ಅದನ್ನು ಅರ್ಥಮಾಡಿಕೊಳ್ಳದಿದ್ದರೆ ಕೂಡಲೇ ತನ್ನಲ್ಲಿರುವ ನೀರನ್ನೇ ಹಂಚಿಕೊಳ್ಳಲು ಪ್ರಾರಂಭಿಸಿ ಯಾವುದಾದರೂ ಅಂಗವನ್ನು ನೀರಿನಿಂದ ವಂಚಿತವಾಗುವಂತೆ ಮಾಡಿ ಬಿಡುತ್ತದೆ. ಆದ್ದರಿಂದ ಬಾಯಾರಿಕೆಯನ್ನು ಸೂಕ್ಷ್ಮವಾಗಿ ಗಮನಿಸಿ, ಅಂತಹ ಕಾಲದಲ್ಲಿ ಅವಶ್ಯಕತೆಯನ್ನು ಅನುಸರಿಸಿ ನೀರನ್ನು ಕುಡಿಯಲೇಬೇಕು.

ಪ್ರಶ್ನೆ: ಅವಶ್ಯಕತೆಯಿಲ್ಲದಿದ್ದಾಗ ನೀರು ಕುಡಿದರೆ ಏನಾಗುತ್ತದೆ?

ಬಾಯಾರಿಕೆಯಿಲ್ಲದಿದ್ದರೂ ಗಂಟೆಗೊಮ್ಮೆ ನೀರು ಕುಡಿಯಿರೆಂದು ಕೆಲವರು ಸೂಚಿಸುತ್ತಾರೆ. ಅವಶ್ಯಕತೆ ಇಲ್ಲದಿದ್ದಲ್ಲಿ ನೀರು ಕುಡಿಯುವುದು ಅಷ್ಟೇನೂ ಜಾಣತನವಲ್ಲ. ಆದರೆ ಅವಶ್ಯಕತೆ ಬಂದಾಗ ನೀರು ಕುಡಿಯುವುದು ಅನಾಹುತಕಾರಿಯಾಗಿರುವುದರಿಂದ ಇದು ಕೊಂಚ ಉತ್ತಮ. ಆದರೆ ಯಾವಾಗಲೂ ಇದನ್ನೇ ಅಭ್ಯಾಸ ಮಾಡಿಕೊಳ್ಳುವುದು ಅಷ್ಟೇನೂ ಉಪಯುಕ್ತವಲ್ಲ. ಸುಮ್ಮನೆ ಮೂತ್ರಜನಕಾಂಗಕ್ಕೆ ಹೊರೆಯಾಗುತ್ತದೆ. ಅದರ ಬದಲ ಅಚಮನ ಒಳ್ಳೆಯದು.

ಅಚಮನ –ಹಾಗೆಂದರೇನು?

ಇದು ಒಂದು ಧಾರ್ಮಿಕ ವಿಧಿಯಾಗಿ ಆಚರಿಸಲಾಗುತ್ತದೆ. ಅದರ ಹಿಂದಿರುವ ಆರೋಗ್ಯದೃಷ್ಟಿಯನ್ನು ಮರೆಯಲಾಗಿದೆ. ಅಂಗೈಗೆ ಒಂದು ಚಮಚದಷ್ಟು (ಅದಕ್ಕಾಗಿಯೇ ನಿಗದಿಪಡಿಸಿದ ವ್ಯವಸ್ಥೆ–ಉದ್ಧರಣೆ) ಸ್ವಚ್ಛ ವಾದ ತಣ್ಣೀರನ್ನು ಮೂರು ಸಲ ಹಾಕಿಕೊಂಡು ಕುಡಿಯುವುದು. ಆಗಾ ಈ ರೀತಿ ಸ್ವಲ್ಪ ಸ್ವಲ್ಪವೇ ನೀರನ್ನು ಶರೀರಕ್ಕೆ ಕೊಡುವುದು ಉತ್ತಮವಾದ ಕೆಲಸ. ದೇವರ ಹೆಸರಿನಲ್ಲಿ ಕುಡಿಯುವುದು ರೂಢಿ. ಭಾರತದಲ್ಲಿ ಎಲ್ಲವೂ ದೇವರ ಹೆಸರಿನಲ್ಲಿಯೇ ತಾನೇ! ಕಳ್ಳತನವೂ ದೇವರ ಹೆಸರಿನಲ್ಲಿ! ಆದರೆ ಅಚಮನಕ್ಕೆ ಸರಿಯಾದ ಕಾರಣವನ್ನು ಅರ್ಥಮಾಡಿಕೊಂಡರೆ ಅದರ ಹಿಂದಿರುವ ತತ್ವ ಅರ್ಥ ವಾಗುತ್ತದೆ. ಯಾವಾಗ ಯಾವಾಗಲೋ ಕುಡಿ ಎಂದರೆ ಆ ನಿಯಮವನ್ನು ಅನುಸರಿಸುವುದಿಲ್ಲವೆಂದೂ, ಅದಕ್ಕಾಗಿ ಒಂದು ನಿಯಮವನ್ನು ಮಾಡಿದ್ದಾರೆ. ಊಟಕ್ಕೆ ಕುಳಿತು ಕೊಳ್ಳುವ ಮುಂಚೆ, ಸಂಧ್ಯಾವಂದನೆಯಲ್ಲಿ ಜಲ–ಮಲಗಳ ವಿಸರ್ಜನೆಯ ನಂತರ– ಹೀಗಾಗಿ ದಿನಕ್ಕೆ ಅನೇಕ ವೇಳೆ ಅಚಮನ ಮಾಡಬೇಕೆಂಬ ನಿಯಮ. ಇದರಿಂದ ಶರೀರದ ಕಾವು ಕಡಿಮೆಯಾಗಿ ತಂಪಾಗುತ್ತದೆ.

ಪ್ರಶ್ನೆ: ನಾನು ಹೆಚ್ಚು ನೀರು ಕುಡಿಯುವುದೇ ಇಲ್ಲ. ಆದರೂ ನನಗೇನೂ ತೊಂದರೆಯಾಗಿಲ್ಲವಲ್ಲ?

ಇದು ಕೆಲವರ ಪ್ರಶ್ನೆ. ಆಗುತ್ತಿರುವ ಹಾನಿ ಈಗ ಕಣ್ಣಿಗೆ ಗೋಚರಿಸದಿರಬಹುದು. ಹಾಗೆಂದರೆ ತೊಂದರೆ ಆಗುತ್ತಿಲ್ಲವೆಂದಲ್ಲ. ಪಿಷ್ಟ ಹಾಗೂ ಕೊಬ್ಬುಗಳು ಶರೀರದಲ್ಲಿ ಸುಟ್ಟಾಗಲೀ ನೀರು ಉತ್ಪತ್ತಿಯಾಗುತ್ತದೆ. ಇದು ಶರೀರದ ಮೂರನೇ ಒಂದು ಭಾಗದ ಅವಶ್ಯಕತೆಯನ್ನು ಪೂರ್ಣ ಗೊಳಿಸುತ್ತದೆ. ಉಳಿದುದಕ್ಕೆ ಸ್ವಚ್ಛ ನೀರೇ ಬೇಕು. ಕಾಫಿ, ಅಥವಾ ತಂಪು ಪಾನೀಯಗಳಿಂದ ಆ ಅವಶ್ಯಕತೆಯನ್ನು ಪೂರ್ಣಗೊಳಿಸುವ ಕಾರ್ಯಕ್ರಮ ನಮ್ಮ ಮನೆಯ ತೊಲೆಗೆ ಬೆಂಕಿ ಹಾಕಿ ಕೈ ಕಾಯಿಸಿಕೊಂಡಂತೆ! ಸದ್ಯದ ಸ್ಥಿತಿಯಲ್ಲಿ ಆರೋಗ್ಯವಿರುವಂತೆ ಕಂಡರೂ ಮುಂದೆ ಅದಕ್ಕಾಗಿ ಭಾರೀ ಬೆಲೆ ತೆರಬೇಕಾಗುತ್ತದೆ.

ಪ್ರಶ್ನೆ: ಇದಕ್ಕೆ ವ್ಯತಿರಿಕ್ತವಾಗಿ ಕೆಲವರು ಆಗಾಗ್ಗೆ ನೀರು ಕುಡಿಯುತ್ತಲೇ ಇರುತ್ತಾರೆ. ಇದು ಸರಿಯೇ?

ಸುಮ್ಮಸುಮ್ಮನೇ ನೀರು ಕುಡಿಯುವುದರಲ್ಲಿ ಅರ್ಥವಿಲ್ಲ. ನಗು ಒಳ್ಳೆಯದೆಂದು ಸದಾ ನಗಲು ಸಾಧ್ಯವೇ? ಸಾಧುವೇ? ಹಾಗೆಯೇ ಇದೂ ಸಹ. ಬಾಯಾರಿಕೆ ಯಾದಾಗ ನೀರು ಕುಡಿಯುವುದು ವಿವೇಕ. ಆದರೆ ಬಾಯಾರಿಕೆ ಯಾಗದೆಯೂ ನೀರು ಕುಡಿಯುವ ವೇಳೆ ಯೊಂದುಂಟು ಅದೇ ಉಷಃಪಾನ– ಬೆಳಿಗ್ಗೆ ಎದ್ದ ತಕ್ಷಣ ನೀರು ಕುಡಿಯುವುದು.

ಪ್ರಶ್ನೆ: ಬೆಳಿಗ್ಗೆ ಎದ್ದ ತಕ್ಷಣ ಬೆಡ್ ಕಾಫಿಯನ್ನು ಬಿಟ್ಟು, ನೀರನ್ನು ಕುಡಿಯಬೇಕೇ?

'ಬೆಡ್ ಕಾಫಿ' ಎಂತಹ ಚೇತೋಹಾರಿ ! ಆದರೆ ಆರೋಗ್ಯ ಹೋಗುವುದು ಹಾರಿ !

ಕಾಫಿ, ಟೀ, ಕೋಕೋ ಮುಂತಾದವುಗಳು ಸಕ್ಕರೆಯೊಂದಿಗೆ ಸೇರಿದಾಗ ಆಮ್ಲೀಯ ಗುಣವನ್ನು ಹೊಂದುತ್ತವೆ. ರಾತ್ರಿಯ ಆಹಾರವಿನ್ನೂ ಜೀರ್ಣವಾಗಿರುವುದಿಲ್ಲ. ಅದೂ ಸಹ ಆಮ್ಲೀಯ ಗುಣದಿಂದ ಕೂಡಿರುತ್ತದೆ. ಎರಡೂ ಸೇರಿ ಆಮ್ಲೀಯತೆ ಹೆಚ್ಚುತ್ತದೆ. ಮುಂದೆ ಅಜೀರ್ಣದ ಕಾಯಿಲೆಯಿಂದ ನರಳಬೇಕಾಗುತ್ತದೆ.

ಪ್ರಶ್ನೆ: ಕಾಫಿಯನ್ನು ಕುಡಿದರೆ ಒಂದು ರೀತಿಯ ಚೈತನ್ಯ ಬರುವುದಲ್ಲ ಅದು ಹೇಗೆ? ಆಗಾಗ ವರ್ತಮಾನ ಪತ್ರಿಕೆಗಳಲ್ಲಿ ಕಾಫಿ–ಟೀ ಕುಡಿಯುವುದು ಒಳ್ಳೆಯದೆನ್ನುವರಲ್ಲ?

ಅವರು ಹೇಳುವುದು 'ಬ್ಲಾಕ್ ಕಾಫಿ' 'ಗ್ರೀನ್ ಟೀ' ಅಂದರೆ ಸಕ್ಕರೆ, ಹಾಲು, ಮಸಾಲೆ ಇತ್ಯಾದಿಗಳನ್ನು ಹಾಕದಿರುವ ಕಾಫಿ, ಟೀ ಇತ್ಯಾದಿಗಳು. ಅದೂ ಸಹ ತುಂಬಾ ಕಡಿಮೆ ಪ್ರಮಾಣದಲ್ಲಿ ಕುಡಿದರೆ ಒಳ್ಳೆಯದೆಂದು ಅವರ ಅಂಬೋಣ. ಪ್ರಯೋಗಗಳು, ಪತ್ರಿಕೆಗಳು ಆಗಾ ವ್ಯತಿರಿಕ್ತವಾದ ಹೇಳಿಕೆಗಳನ್ನೂ ನೀಡುತ್ತಿರುತ್ತವೆ. ಈ ಗೊಂದಲದಿಂದ ಹೊರಕ್ಕೆ ಬರಲು ನಾವು ಅದನ್ನು ಬಿಡುವುದೇ ಸರಿಯಾದ ದಾರಿ.

–ಮುಂದುವರೆಯುತ್ತದೆ.





## ಶ್ರೀ ಸಿದ್ಧಗಂಗಾ ಮಠದ ಶಾಶ್ವತ ದಾಸೋಹ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನಿಯರುಗಳು

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4692. | ಶ್ರೀಮತಿ ರೇಣುಕ ಸುರೇಶ್‌ಬಾಬು<br>ಮಹಾಲಕ್ಷ್ಮಿಪುರಂ, ಬೆಂಗಳೂರು. | 2001.00 |
| 4693. | ಶ್ರೀ ಎಂ.ಪಿ. ಸೋಮಣ್ಣ ಮತ್ತು ಮಕ್ಕಳು<br>ಮಂಚೇನಹಳ್ಳಿ, ಗೌರಿಬಿದನೂರು ತಾ॥. | 2101.00 |
| 4694. | ಶ್ರೀ ಕೆ.ಎನ್. ಸೋದರ, ಶಿಕ್ಷಕರು, ಮಕ್ಕಳು, ಮೊಮ್ಮಕ್ಕಳು<br>ಮೃತ್ಯುಂಜಯನಗರ, ಧಾರವಾಡ. | 2000.00 |
| 4695. | ಶ್ರೀ ಆರ್. ಅರವಿಂದ,<br>ಜೆ.ಎಸ್. ನಗರ, ಗೆಳೆಯರ ಬಳಗ, ಬೆಂಗಳೂರು | 1000.00 |
| 4696. | ಶ್ರೀಮತಿ ಎಸ್.ವಿ. ಸುಶೀಲಮ್ಮ<br>ರಾಜರಾಜೇಶ್ವರಿನಗರ ಅಂಚೆ, ಬೆಂಗಳೂರು. | 5001.00 |
| 4697. | ಶ್ರೀ ಎಸ್.ಡಿ. ವಾರದ<br>ಕೂಬ ಪ್ಲಾಟ್, ಗುಲ್ಬರ್ಗಾ. | 10,000.00 |
| 4698. | ಶ್ರೀಮತಿ ಮಹಾದೇವು ಮತ್ತು ಕಾಶೀನಾಥ ಬಸೆಟ್ಟೆಪ್ಪ ಸಾಬನೆ<br>ವಿಜಯಾಬ್ಯಾಂಕ್ ಲೇಔಟ್, ಬೆಂಗಳೂರು. | 2011.00 |
| 4699. | ಶ್ರೀ ಬಿ. ರುಪೇಶ್‌ಕುಮಾರ್ ಬಿನ್ ಜಿ. ಬಸವಣ್ಣ<br>ಮಾಕಹಳ್ಳಿ, ಭೂನಾಪುರ ಅಂ, ಚಾ.ರಾ. ತಾ॥ | 2001.00 |
| 4700. | ಡಾ॥ ಕಲ್ಯಾಣಿ ಗಾಂಧಿ, ಐ.ಐ.ಎಂ.<br>ಬನ್ನೇರುಘಟ್ಟ, ಬೆಂಗಳೂರು. | 1001.00 |
| 4701. | ಶ್ರೀ ಬಿ. ಕೃಷ್ಣಪ್ಪ ನಿವೃತ್ತ ಎನ್.ಜಿ.ಇ.ಎಫ್<br>ಬೈರಸಂದ್ರ, ಸಿ.ವಿ. ರಾಮನ್ ಅಂಚೆ, ಬೆಂಗಳೂರು. | 1001.00 |
| 4702. | ಶ್ರೀ ಇಟಗಿ<br>ಎಸ್.ಬಿ.ಐ. ಕಾಲೋನಿ, ಸಿರಸಿ, ನಾರ್ತ್ ಕೆನರಾ | 1001.00 |
| 4703. | ಶ್ರೀ ಬಿ.ಆರ್. ಭದ್ರೇಶ್<br>ನಾಗಪುರ 2ನೇ ಹಂತ, ಬೆಂಗಳೂರು. | 2001.00 |
| 4704. | ಶ್ರೀ ಶಿವಶಂಕರ ಆರಾಧ್ಯ ಬಿನ್ ರೇಣುಕಾರಾಧ್ಯ<br>ಉತ್ತವಳ್ಳಿ ಅಂಚೆ, ಚಾಮರಾಜನಗರ ಜಿಲ್ಲೆ. | 2000.00 |
| 4705. | ಶ್ರೀ ಎ.ಡಿ. ಚನ್ನಬಸಪ್ಪ ಬಿನ್ ಲೇಟ್ ತಿಮ್ಮಪ್ಪ, ಶಿಕ್ಷಕರು<br>ಓ.ಟಿ.ಸಿ. ರಸ್ತೆ, ಬೆಂಗಳೂರು. | 2000.00 |
| 4706. | ಡಾ॥ ನಾಗರಾಜು ಮತ್ತು ಎಸ್. ರುದ್ರೇಗೌಡ, ಸದಸ್ಯರುಗಳು<br>ಕರ್ನಾಟಕ ಸೇವಾ ಆಯೋಗ, ಬೆಂಗಳೂರು. | 50,001.00 |
| 4707. | ಶ್ರೀ ಗಣೇಶ್ ಆರ್. ಜಕ್ಕಳಿ<br>ಜಯನಗರ 4ನೇ ಬ್ಲಾಕ್, ಹಂತ, ಬೆಂಗಳೂರು. | 2001.00 |
| 4708. | ಶ್ರೀ ಡಿ.ಎಲ್. ವಿಜಯದೇವ್ ಮತ್ತು ಮಕ್ಕಳು<br>ಬೀರೂರು, ಚಿಕ್ಕಮಗಳೂರು ಜಿಲ್ಲೆ. | 2001.00 |
| 4709. | ಶ್ರೀ ಕಮಲಮ್ಮ ರಾಜಶೇಖರ ಗೌಡ ಪಾಟೀಲ್ರ<br>ಬಸವೇಶ್ವರ ನಗರ, ಬ್ಯಾಡಗಿ, ಹಾವೇರಿ ಜಿಲ್ಲೆ. | 1001.00 |
| 4710. | ಶ್ರೀ ಕೆ.ಆರ್. ಶರ್ಮಾ<br>7ನೇ ಬ್ಲಾಕ್, ಜಯನಗರ, ಬೆಂಗಳೂರು. | 500.00 |
| 4711. | ಶ್ರೀ ವೀರಭದ್ರಪ್ಪ ಮತ್ತು ಮಕ್ಕಳು<br>ಹೊಸಪೇಟೆ ರಸ್ತೆ, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ. | 5001.00 |
| 4712. | ಶ್ರೀ ಜಗದಾಂಬ ಗುರುಮೂರ್ತಿ<br>ಶ್ರೀರಂಗಪಟ್ಟಣ, ಮೈಸೂರು ರಸ್ತೆ, ಬೆಂಗಳೂರು. | 2001.00 |
| 4713. | ಶ್ರೀ ಡಿ.ವಿ. ಶಿವಯೋಗೇಶ್ವರ<br>ಬ್ಯಾಟರಾಯನಪುರ, ಮೈಸೂರು ರಸ್ತೆ, ಬೆಂಗಳೂರು. | 2001.00 |
| 4714. | ಶ್ರೀ ಬಿ.ಎಸ್. ಸಂತೋಷ್ ಬಿನ್ ಬಿ.ಪಿ. ಸಿದ್ಧಗಂಗಯ್ಯ<br>ನಾಗರಭಾವಿ ಅಂಚೆ, ಬೆಂಗಳೂರು. | 2501.00 |
| 4715. | ಶ್ರೀ ಚಂದ್ರಮೋಹನ್ ಆರ್.ಎಸ್.<br>ರಾಜಾಜಿನಗರ, ಬೆಂಗಳೂರು. | 30000.00 |
| 4716. | ಶ್ರೀ ಎಸ್. ಹಾಲಪ್ಪ ಬಿನ್ ಎನ್. ಕೆಂಚಪ್ಪ<br>ತೊಲಹಳ್ಳಿ ಅಂಚೆ, ಕೂಡ್ಲಿಗಿ ಅಂ., ಬಳ್ಳಾರಿ. | 5000.00 |
| 4717. | ಶ್ರೀ ರವೀಂದ್ರರೆಡ್ಡಿ ಬಿನ್ ಪುರುಷೋತ್ತಮರೆಡ್ಡಿ<br>ಸೂಗೂರು, ಸಿರಗುಪ್ಪ ತಾ॥ ಬಳ್ಳಾರಿ ಜಿಲ್ಲೆ. | 6105.00 |
| 4718. | ಶ್ರೀಮತಿ ಜಯಲಕ್ಷ್ಮಿದೇವಿ ಕರಿಯಣ್ಣ<br>ಬಡ್ಡಿಹಳ್ಳಿ 9ನೇ ಮೈನ್, ಕ್ಯಾತ್ಸಂದ್ರ, ತುಮಕೂರು. | 10,001.00 |
| 4719. | ಶ್ರೀಮತಿ ಹೇಮಲತ ಕೋಂ. ಲೇಟ್ ನಾಗರಾಜ್ ಪಾಟೀಲ್<br>ಶ್ರೀ ಸಿ. ಡಿ.ಇಡಿ. ಕಾಲೇಜು, ಬಿ.ಹೆಚ್. ರಸ್ತೆ, ತುಮಕೂರು. | 1,000.00 |
| 4720. | ಶ್ರೀ ಶಿವಯೋಗಿ ವಿ. ಹಿರೇಮಠ್<br>ಗುಳೇದಗುಡ್ಡ, ಬಾದಾಮಿ ತಾ॥ ಬಾಗಲಕೋಟೆ | 2001.00 |
| 4721. | ಶ್ರೀಮತಿ ಎಸ್. ಪ್ರೇಮಾ, ಇನ್‌ಸ್ಟ್ರಕ್ಟರ್,<br>ಸಿವಿಲ್ ಇಂ. ವಿಭಾಗ, ಎಸ್.ಐ.ಟಿ., ತುಮಕೂರು. | 1,001.00 |
| 4722. | ಶ್ರೀ ಜಿ.ಪಿ. ಉಮಾಚಂದ್ರಶೇಖರ್ ಮತ್ತು ಸಹೋದರರು<br>ಗೋಣಿಪುರ, ಕೆ.ಗೊಲ್ಲಹಳ್ಳಿ, ಕೆಂಗೇರಿ ಹೋ॥. | 10,005.00 |
| 4723. | ಶ್ರೀಮತಿ ರುದ್ರಮ್ಮನವರು<br>ಹೊನ್ನರಾಯನಹಳ್ಳಿ, ಮದಲಕೋಟೆ ಅಂ., | 10,000.00 |
| 4724. | ಶ್ರೀ ಸಿ.ಬಿ. ಪ್ರಸನ್ನ ಮಾಜಿ ಸೈನಿಕ,<br>ಕೊಡ್ಲಪೇಟೆ ಅಂ., ಕೊಡಗು ಜಿಲ್ಲೆ. | 11,111.00 |
| 4725. | ಶ್ರೀ ಎನ್. ರವಿಕುಮಾರ್ ಎಲ್.ಐ.ಸಿ. ಏಜೆಂಟ್<br>ಸಂಪಿಗೆರಾಮನಗರ, ಬೆಂಗಳೂರು. | 1,000.00 |
| 4726. | ಶ್ರೀ ಹೆಚ್.ಎಸ್. ಪ್ರಕಾಶ್‌ಬಾಬು ಮತ್ತು ಶ್ರೀಮತಿ ವೀಣಾ<br>ಮಹಾದೇವಪುರ ಅಂಚೆ, ಬೆಂಗಳೂರು. | 2,010.00 |
| 4727. | ಕು॥ ಅನ್‌ಸ್ರುತ ಬಿನ್. ಐ.ಡಿ. ಮಲ್ಲಿಕಾರ್ಜುನ<br>ಐಗೂರು, ಯಸಳೂರು ಹೊ., ಸಕಲೇಶಪುರ. | 2,000.00 |
| 4728. | ಶ್ರೀಮತಿ ರತ್ನ ಸಿ. ಶಿವರುದ್ರಪ್ಪ<br>ಬನಶಂಕರಿ 2ನೇ ಸ್ಟೇಜ್, ಬೆಂಗಳೂರು. | 50,000.00 |
| 4729. | ಶ್ರೀ ಹೆಚ್. ಬಸವಲಿಂಗಪ್ಪಶಾಸ್ತ್ರಿ<br>ಹಾಲಿಗೊಂಡನಹಳ್ಳಿ, ಜಾಜೂರು ಅಂಚೆ, ಚಳ್ಳಕೆರೆ. | 2,001.00 |
| 4730. | ಶ್ರೀ ಬಿ. ಕೃಷ್ಣಪ್ಪ ಮತ್ತು ಕುಟುಂಬವರ್ಗ<br>ಸಿ.ವಿ. ರಾಮನ್ ನಗರ, ಬೆಂಗಳೂರು. | 1,001.00 |
| 4731. | ಅಧ್ಯಕ್ಷರು, ಸಿದ್ಧಗಂಗಾ ವಿದ್ಯಾಸಂಸ್ಥೆ ಬಳಕೆದಾರರ<br>ಸಂಘ ಲಿ., ಶ್ರೀಮಠ, ತುಮಕೂರು. | 4,004.00 |



## ದಾಸೋಹ ನಿಧಿ



| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4732. | ಶ್ರೀ ಎಂ.ಎಂ. ಮಂಜುನಾಥ<br>ಕೆ.ಪಿ. ಅಗ್ರಹಾರ, ಬೆಂಗಳೂರು. | 10,000.00 |
| 4733. | ಶ್ರೀ ಕೆ. ಮಂಜುನಾಥ<br>ಮಲ್ಲೇಶ್ವರಂ, ಬೆಂಗಳೂರು. | 5,000.00 |
| 4734. | ಶ್ರೀ ಜಿ.ಎನ್. ಬುಳಗಣ್ಣನವರ್, ಐ.ಎಫ್.ಎಸ್. (ರಿ.)<br>ಸದಾಶಿವನಗರ, ಬೆಂಗಳೂರು. | 1,001.00 |
| 4735. | ಶ್ರೀ ಹೆಚ್.ಜಿ. ಪಾಲಾಕ್ಷಯ್ಯ ಮತ್ತು ಹೆಚ್.ಜಿ. ರೇಣುಕಾರಾಧ್ಯ<br>ವಿಜಯನಗರ 1ನೇ ಸ್ಟೇಜ್, ಮೈಸೂರು. | 50,000.00 |
| 4736. | ಶ್ರೀ ಸುದರ್ಶನಮೂರ್ತಿ ಮತ್ತು ಶ್ರೀಮತಿ ರುಕ್ಮಿಣಿ<br>ಬಿ.ಎಸ್.ಕೆ. 3ನೇ ಸ್ಟೇಜ್, ಬೆಂಗಳೂರು. | 5,001.00 |
| 4737. | ಶ್ರೀ ಎನ್.ವೈ. ತೋಟಗೇರ<br>ಶ್ರೀಶಕ್ತಿ ಇಂಡಸ್ಟ್ರೀಸ್, ಬೆಂಗಳೂರು. | 2,001.00 |
| 4738. | ಶ್ರೀ ಕೆ.ಎಸ್. ಬಸವರಾಜು ಬಿನ್ ಶಾಂತಯ್ಯ ವಡೆಯರ್<br>ಕೆಂಚನಕುಪ್ಪೆ, ಬಿಡದಿ ಹೋ॥ ರಾಮನಗರ. | 5,101.00 |
| 4739. | ಶ್ರೀಮತಿ ರಮ್ಯ ಮತ್ತು ಶ್ರೀ ಟಿ.ಎಸ್. ಸುರೇಶ್ ಕೇರಾಫ್ ಶಿವಣ್ಣ<br>ತಾವರೆಕೆರೆ, ಮಾಗಡಿ ಮುಖ್ಯರಸ್ತೆ, ಬೆಂಗಳೂರು. | 25,101.00 |
| 4740. | ಲಿಂ॥ ರುದ್ರೇಶಯ್ಯನವರ ಧರ್ಮಪತ್ನಿ ಶ್ರೀಮತಿ ವಿಜಯಾಂಬ<br>ಆರ್.ಪಿ.ಸಿ. ಬಡಾವಣೆ, ಬೆಂಗಳೂರು. | 50,000.00 |
| 4741. | ಶ್ರೀ ಶಿವರುದ್ರಪ್ಪ<br>ಕೆಂಗೇರಿ ಹೋ॥, ಬೆಂಗಳೂರು ದಕ್ಷಿಣ. | 1,00,000.00 |
| 4742. | ಡಾ॥ ಶರಣಗೌಡ 'ಶುಶ್ರುತ ಕ್ಲಿನಿಕ್'<br>ಲಿಂಗಸಗೂರು, ರಾಯಚೂರು ಜಿಲ್ಲೆ. | 500.00 |
| 4743. | ಶ್ರೀ ಡಿ.ಎನ್. ಶ್ರೀಕಂಠಮೂರ್ತಿ<br>ಬನಶಂಕರಿ 3ನೇ ಸ್ಟೇಜ್, ಬೆಂಗಳೂರು. | 1,000.00 |
| 4744. | ಶ್ರೀ ಬಿ.ವಿ. ಚನ್ನವೀರದೇವರು, ಮುಖ್ಯಶಿಕ್ಷಕರು,<br>ಬೆಳ್ಳೂರು, ಮಡಿವಾಳ ಅಂ., ಮಾಲೂರು. | 2.000.00 |
| 4745. | ಶ್ರೀಮತಿ ರುದ್ರಾಣಿ ರಾಜೇಶ್<br>ಗಂಡಸಿ ಹೋಬಳಿ, ಅರಸೀಕೆರೆ, ಹಾಸನ ಜಿ. | 10,300.00 |
| 4746. | ಶ್ರೀ ಗಂಗಾಧರಪ್ಪ ಸ.ಶಿ. ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾ॥. ಬೆಂ.ಗ್ರಾ.ಜಿ. | 1,001.00 |
| 4747. | ಶ್ರೀ ಶಾಂತ ಮಹಾಲಿಂಗಸ್ವಾಮಿ<br>ಬಸವೇಶ್ವರನಗರ, ಬೆಂಗಳೂರು. | 1,001.00 |
| 4748. | ಶ್ರೀ ಲಿಂಗಣ್ಣಸ್ವಾಮಿ ಎನ್. ಉಪನ್ಯಾಸಕರು,<br>ಸರ್ಕಾರಿ ಪ.ಪೂ.ಕಾಲೇಜು, ಕಳಸ, ಮೂಡಿಗೆರೆ. | 1,000.00 |
| 4749. | ಶ್ರೀ ಕೆ.ಎನ್.ಎಸ್. ರೆಡ್ಡಿ,<br>6ನೇ ಅಡ್ಡರಸ್ತೆ, ಸ್ವರ್ಣನಗರ, ಕೆ.ಜಿ.ಎಫ್. | 500.00 |
| 4750. | ಶ್ರೀಮತಿ ವೆಂಕಟೇಶಮ್ಮ<br>ಮಂಜುನಾಥನಗರ, ರಾಜಾಜಿನಗರ, ಬೆಂ. | 1,000.00 |
| 4751. | ಶ್ರೀಮತಿ ಟಿ.ಪಿ. ಸುಜಾತ<br>ವಿಜಯನಗರ, ಬೆಂಗಳೂರು. | 2,500.00 |
| 4752. | ಶ್ರೀ ಕೂಡತನ ಮಗ್ಗಿ ಈರಪ್ಪ ಬಿನ್ ನಾಗಪ್ಪ<br>ಕೆಂಚಮ್ಮನಹಳ್ಳಿ, ಎಂ. ಕಲ್ಲಹಳ್ಳಿ ಅಂ., ಹೂವಡಗಲಿ | 1,000.00 |
| 4753. | ಮೆ॥ ಕರ್ನಾಟಕ ಗ್ರೋಯರ್ಸ್ ಫೆಡರೇಶನ್<br>ರಾಘವೇಂದ್ರನಗರ, ಸಕಲೇಶಪುರ, ಹಾಸನ ಜಿಲ್ಲೆ. | 1,01,101.00 |
| 4754. | ಶ್ರೀ ಹೆಚ್.ಜಿ. ಮಂಜುನಾಥ<br>ಹನಚಲ ಅಂ., ಬಂಗಾರಪೇಟೆ ತಾ., ಕೋಲಾರ | 1,000.00 |
| 4755. | ಶ್ರೀ ಕಾಳೇಗೌಡರು ನಿಡವಂದ<br>ನಿಡವಂದ ಅಂಚೆ, ನೆಲಮಂಗಲ ತಾ॥ ಬೆಂ.ಗ್ರಾ. | 1,000.00 |
| 4756. | ಶ್ರೀಮತಿ ಲಕ್ಷ್ಮೀದೇವಮ್ಮ ಮತ್ತು ಚನ್ನಪ್ಪನವರ ಜ್ಞಾಪಕಾರ್ಥ<br>ಶ್ರೀಮತಿ ಲಲಿತಾ ಮಲ್ಲೇಶ್ ಮತ್ತು ಉದಯಶಂಕರ<br>ಜಯನಗರ, ಬೆಂಗಳೂರು. | 5.115.00 |
| 4757. | ಶ್ರೀಮತಿ ಪರಿಮಳದೇವಿ<br>ಮತ್ತೀಕೆರೆ, ಬೆಂಗಳೂರು. | 5,000.00 |
| 4758. | ಶ್ರೀ ಚಂದ್ರಶೇಖರ್ ಎಂ.ಎಸ್. ಎಕ್ಸಿಕ್ಯುಟಿವ್ ಇಂಜಿನಿಯರ್<br>14ನೇ ಕ್ರಾಸ್. ಎಸ್.ಎಸ್. ಪುರಂ, ತುಮಕೂರು. | 10,000.00 |
| 4759. | ಶ್ರೀ ಬಿ. ಗಾಂಧಿ<br>ಯಲಹಂಕ ನ್ಯೂ ಟೌನ್, ಬೆಂಗಳೂರು. | 25,000.00 |
| 4760. | ಶ್ರೀ ಎಂ. ಸೀತಾರಾಮಯ್ಯ, ಹಿಂದಿ ಶಿಕ್ಷಕರು,<br>ಶ್ರೀ ಜ.ಪ್ರೌ.ಶಾಲೆ, ನಿಟ್ರಹಳ್ಳಿ, ಮಧುಗಿರಿ. | 1,200.00 |
| 4761. | ಶ್ರೀಮತಿ ಸುಶೀಲ, ಪ್ರೊ. ಎ. ಶ್ರೀಪಾದ<br>ಜೆ.ಪಿ. ನಗರ, 2ನೇ ಹಂತ, ಬೆಂಗಳೂರು. | 5,001.00 |
| 4762. | ಕು॥ ಶ್ರೀದೇವಿ ಬಿನ್ ಶಿವಪ್ಪ ಚೌದರಿ,<br>ಚವಾಣ್ ಪ್ಲಾಟ್, ಈಳಕಲ್, ಹುನಗುಂದ ತಾ॥ | 501.00 |
| 4763. | ಶ್ರೀ ರುದ್ರಾರಾಧ್ಯ ಅಂಡ್ ಕಂಪನಿ.,<br>ಎನ್.ಪಿನ್. ಲೇನ್, ಬೆಂಗಳೂರು. | 2,002.00 |
| 4764. | ಶ್ರೀ ಶುಭರಾಜು<br>ನಾಗಸಂದ್ರ ಅಂಚೆ, ಬೆಂಗಳೂರು. | 2,001.00 |
| 4765. | ಶ್ರೀ ಜಿ. ವೀರಭದ್ರಯ್ಯ, ನಿವೃತ್ತ ಶಿಕ್ಷಕರು,<br>ಗುಡ್ಡದಹಳ್ಳಿ ಅಂಚೆ, ಮಡಕಶಿರಾ ತಾ॥ | 2,000.00 |
| 4766. | ಶ್ರೀ ಅರುಣಾ ಬೋರಣ್ಣನವರ<br>ಹೊಸಪೇಟೆ, ಕೆರೂರು ಅಂಚೆ, ಬಾದಾಮಿ ತಾ॥ | 1,111.00 |
| 4767. | ಶ್ರೀಮತಿ ಪೃಥ್ವಿ ಬಿನ್ ಈರಣ್ಣ<br>ರಾಘವೇಂದ್ರನಗರ್, ತುಮಕೂರು. | 5,001.00 |
| 4768. | ಶ್ರೀ ಎಸ್. ಗಂಗಾಧರಯ್ಯ ಮತ್ತು ಶ್ರೀಮತಿ ಆಶಾ ಕೆ.ಜಿ.<br>ನಾಗೇನಹಳ್ಳಿ, ಜೆ.ಸಿ.ಪುರ, ಚಿ.ನಾ. ಹಳ್ಳಿ ತಾ॥ | 2,000.00 |
| 4769. | ಶ್ರೀಮತಿ ಗಂಗಮ್ಮ ಕೋಂ ಬಿ. ಸಿದ್ಧಬಸಪ್ಪ ಮತ್ತು ಮಕ್ಕಳು<br>ಅಂಜನಾಪುರ, ಬೆಂಗಳೂರು. | 25,000.00 |
| 4770. | ಶ್ರೀ ಪಿ. ರಾಜೇಶ್ವರಿಮೂರ್ತಿ<br>ಜೆ.ಪಿ. ನಗರ, 2ನೇ ಫೇಸ್, ಬೆಂಗಳೂರು. | 2,001.00 |
| 4771. | ಶ್ರೀಮತಿ ಪಿನ್ನೆಪತಿ ಶಾರದಮ್ಮ ಮತ್ತು ಶ್ರೀ ಬಸವಯ್ಯ<br>ಧರ್ಮಾವರಂ, ಆಂದ್ರಪ್ರದೇಶ್. | 5,111.00 |
| 4772. | ಶ್ರೀ ಎಂ. ರವಿಶಂಕರ್, ನಿರ್ದೇಶಕರು, ಪ್ರಿಂಟಿಂಗ್ ಮತ್ತು<br>ಸ್ಟೇಷನರಿ ಮತ್ತು ಪಬ್ಲಿಕೇಶನ್ ವಿಭಾಗ, ಬೆಂಗಳೂರು. | 1,001.00 |

–ಮುಂದುವರೆಯುತ್ತದೆ.

RNI No. 17139/69 "Siddaganga" Monthly - Postal Reg. No. KA/SK/TMR/385/2006-08



ತುಮಕೂರಿನಲ್ಲಿ ನಡೆದ 'ಲಯನ್ಸ್ ಕ್ಲಬ್ ತುಮಕೂರು ಸಿದ್ಧಗಂಗಾ' ಉದ್ಘಾಟನಾ ಸಮಾರಂಭವನ್ನು ಪೂಜ್ಯ ಶ್ರೀಗಳವರು ನೆರವೇರಿಸಿದರು. ಈ ಸಂದರ್ಭದಲ್ಲಿ ಲಯನ್ಸ್ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಶ್ರೀಮಠಕ್ಕೆ ಇತ್ತೀಚೆಗೆ ಭೇಟಿ ನೀಡಿದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರಾದ ಶ್ರೀ ನರೇಂದ್ರಸ್ವಾಮಿ ಅವರು ಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು



ಗುಬ್ಬಿ ತಾಲ್ಲೂಕು ವೀರಣ್ಣಗುಡಿ ಗ್ರಾಮದಲ್ಲಿ ಮಾಜಿ ಶಾಸಕ ದಿ. ಎನ್. ವೀರಣ್ಣಗೌಡರ ಪುತ್ಥಳಿಯನ್ನು ಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು




ತುಮಕೂರಿನ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ನಡೆದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಆಶೀರ್ವಚನ ನೀಡಿದರು.




ಭಾರತೀಯ ವೈದ್ಯಕೀಯ ಸಂಘದ ತುಮಕೂರು ಶಾಖೆ ಏರ್ಪಡಿಸಿದ್ದ 'ವೈದ್ಯ ದಿನಾಚರಣೆ' ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಸಂಘದ ತ್ರೈಮಾಸಿಕವನ್ನು ಲೋಕಾರ್ಪಣೆ ಮಾಡಿದರು.



ತುಮಕೂರಿನಲ್ಲಿ ನಡೆದ ಕ್ರೀಡಾ ಸ್ಪರ್ಧೆಯ ಉದ್ಘಾಟನಾ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ತುಮಕೂರು ಜಿಲ್ಲಾಧಿಕಾರಿಗಳಾದ ಡಾ. ಶ್ರೀ ಸೋಮಶೇಖರ್ ಅವರು ನೆರವೇರಿಸಿದರು.